

ಭಗವಾನ್ ಶ್ರೀವೇದವ್ಯಾಸ ಪ್ರಣೀತ

# ಮಹಾಭಾರತ



ಸಮಗ್ರ ಶ್ಲೋಕಗಳ ಕನ್ನಡಾನುವಾದ

ಶ್ರೀಮದಾನಂದತೀರ್ಥಭಗವತ್ಪಾದರ ತಾತ್ಪರ್ಯನಿರ್ಣಯ ಹಾಗೂ

ಶ್ರೀವಾದಿರಾಜಗುರುಸಾರ್ವಭೌಮರ ಲಕ್ಷಾಲಂಕಾರದೊಂದಿಗೆ

ಭಾಗ-22

## ಶಲ್ಯಪರ್ವ

## ಮತ್ತು ಗದಾಪರ್ವ



ಪ್ರಕಾಶಕರು :

ತತ್ವಸಂಶೋಧನಸಂಸತ್ (ರಿ.)

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ

ಶ್ರೀಪಲಿಮಾರು ಮಠ, ಉಡುಪಿ.

॥ ಶ್ರೀರಾಮಶ್ರೀ ॥

॥ ಶ್ರೀವೇದವ್ಯಾಸೋ ವಿಜಯತೇ ॥

ಭಗವಾನ್ ಶ್ರೀವೇದವ್ಯಾಸ ಪ್ರಣೀತ

# ಮಹಾಭಾರತ

## ಭಾಗ-೨೨

# ಶಲ್ಯಪರ್ವ

ಸಮಗ್ರ ಶ್ಲೋಕಗಳ ಕನ್ನಡಾನುವಾದ

(ಶ್ರೀಮದಾನಂದತೀರ್ಥರ ತಾತ್ಪರ್ಯನಿರ್ಣಯ ಶ್ರೀವಾದಿರಾಜಗುರುಸಾರ್ವಭೌಮರ ಲಕ್ಷಾಲಂಕಾರದೊಂದಿಗೆ)

ಅನುಗ್ರಹ :

**ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**

ಶ್ರೀಹೃಷೀಕೇಶತೀರ್ಥಸಂಸ್ಥಾನಂ, ಪಲಿಮಾರು ಮಠ, ಉಡುಪಿ

ಅನುವಾದಕರು :

ವಿದ್ವಾನ್ ಗಣಪತಿ ಭಟ್, ಉಡುಪಿ.



ಪ್ರಕಾಶಕರು :

**ತತ್ತ್ವಸಂಶೋಧನಸಂಸತ್ (ರಿ.)**

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ

ಶ್ರೀಪಲಿಮಾರು ಮಠ, ಉಡುಪಿ.

**ಮಹಾಭಾರತ ಶಲ್ಯಪರ್ವ-ಭಾರತತಾತ್ಪರ್ಯನಿರ್ಣಯ- ಲಕ್ಷಾಲಂಕಾರ ಕನ್ನಡಾನುವಾದದ** ಸಮಗ್ರ ಯೋಜನೆಯ ಈ ಕೃತಿಯು ತ್ರೈಲೋಕ್ಯಾಚಾರ್ಯ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಪ್ರತಿಷ್ಠಿತನಾದ ಉಡುಪಿ ಶ್ರೀಕೃಷ್ಣನ ಸನ್ನಿಧಾನದಲ್ಲಿ ಪರಮಪೂಜ್ಯ ಶ್ರೀ ಶ್ರೀವಿದ್ಯಾಧೀಶತೀರ್ಥ ಶ್ರೀಪಾದರ ದ್ವಿತೀಯ ಪರ್ಯಾಯದ ಶುಭಸಂದರ್ಭದಲ್ಲಿ ಅನೇಕ ಪೀಠಾಧಿಪತಿಗಳ ಮತ್ತು ಸಾಧಕರ ಸಮಕ್ಷಮದಲ್ಲಿ ಅನಾವರಣಗೊಂಡಿತು.

## ಶಲ್ಯಪರ್ವ - ಭಾಗ ೨೨



ISBN : 978-93-88813-00-6

**ಈ ಗ್ರಂಥವು ಕರ್ನಾಟಕ ಸರ್ಕಾರದ ಆರ್ಥಿಕ ನೆರವಿನಿಂದ ಮುದ್ರಿತವಾಗಿದೆ**

| | | |
|---|---|---|
| **ಪುಟಗಳು** | - | XXX + 576 = 606 |
| **ಮುದ್ರಿತ ಪ್ರತಿಗಳು** | - | 1000 |
| **ಬೆಲೆ** | - | **ರೂ. 425/-** |
| **ಅನುವಾದಕರು** | - | ವಿದ್ವಾನ್ ಗಣಪತಿ ಭಟ್<br>ಉಡುಪಿ. |
| **ಪ್ರಕಾಶಕರು** | - | ತತ್ವಸಂಶೋಧನಸಂಸತ್, ಪಲಿಮಾರು ಮಠ,<br>ಉಡುಪಿ. |
| **ಪುಟ ಸಂಯೋಜನೆ ಮತ್ತು ಸಂಸ್ಕೃತ ಶ್ಲೋಕ ಲಿಪ್ಯಂತರ** | - | ಎಂ. ಶರತ್ ಚಂದ್ರ, ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್<br>ಮೈಸೂರು. ಮೊ : 7899779255 |
| **ಅಕ್ಷರ ಜೋಡಣೆ** | - | ವಿದ್ವಾನ್ ಗಣಪತಿ ಭಟ್, ಉಡುಪಿ. |
| **ಮುದ್ರಕರು** | - | ಪವನ್ ಪ್ರಿಂಟರ್ಸ್, ಬೆಂಗಳೂರು. |
| **ಗ್ರಂಥಪ್ರಾಪ್ತಿ** | - | ಪಲಿಮಾರು ಮಠ, ಉಡುಪಿ. |



ನವನವಗುಣಸಾಂದ್ರಂ ನೌಮಿ ಮಧ್ವಾಖ್ಯಚಂದ್ರಮ್



ಶ್ರೀಮದ್ವಾದಿರಾಜಕೇಸರಿಣೇ ನಮಃ

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

## ಪರಮಪೂಜ್ಯ ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದರು

ಶ್ರೀ ಹೃಷೀಕೇಶತೀರ್ಥ ಸಂಸ್ಥಾನಮ್, ಶ್ರೀಪಲಿಮಾರು ಮಠ, ಉಡುಪಿ.

# ಅನುಗ್ರಹ ಸಂದೇಶ

ಎಷ್ಟು ಬಾರಿ ಶಲ್ಯ-ಗದಾ ಪರ್ವಗಳನ್ನು ಅಧ್ಯಯನ ಮಾಡಿದರೂ ಒಂದು ವಿಷಯದಲ್ಲಿ ಪುನಃ ಪುನಃ ಸಂಶಯವು ಹುಟ್ಟುತ್ತಲೇ ಇರುತ್ತದೆ. ಈ ಸಂಶಯವು ಪರಿಹಾರವಾಗಬೇಕಾದಲ್ಲಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಮಹಾಭಾರತ ತಾತ್ಪರ್ಯ ನಿರ್ಣಯವನ್ನು ಅವಲೋಕಿಸಲೇಬೇಕು. ವ್ಯಾಸರ ಅಂತರಂಗವನ್ನು ಎಳೆಎಳೆಯಾಗಿ ಬಿಡಿಸಿಕೊಟ್ಟವರು ನಮ್ಮ ಶ್ರೀಮದಾಚಾರ್ಯರು.

ಶಲ್ಯನು ಧರ್ಮಯುದ್ಧದಿಂದ ಧರ್ಮಾತ್ಮನಾದ ಧರ್ಮಜನಿಂದಲೇ ಮರಣ ಹೊಂದಿದ ಬಳಿಕ ಸಮಗ್ರ ಸೇನೆಯು ಹತವಾಯಿತೆಂದು ಖಿನ್ನನಾದ ದುರ್ಯೋಧನನು ದ್ವೈಪಾಯನ ಸರಸನ್ನು ಕುರಿತು ತನ್ನ ಮೂಲಮಂತ್ರಗಳನ್ನು ಜಪಿಸಲು ಹೊರಟನು. ದ್ವೈಪಾಯನ ಸರೋವರವನ್ನು ಪ್ರವೇಶಿಸಿ ಜಲಸ್ತಂಭನ ವಿದ್ಯೆಯಿಂದ ದುರ್ವಾಸರು ನೀಡಿದ ಮಂತ್ರಗಳನ್ನು ಜಪಿಸಲಾರಂಭಿಸಿದನು. ಏಳು ದಿನಗಳ ಕಾಲ ನೀರಿನಲ್ಲಿದ್ದು ಈ ಮಂತ್ರಗಳನ್ನು ಜಪಿಸಿದಲ್ಲಿ ಸತ್ತವರೆಲ್ಲ ಪುನಃ ಜೀವಂತವಾಗುವ ಅಪಾಯವು ಇತ್ತು. ಇದನ್ನು ಕಂಡ ಕೃಷ್ಣನು ಧರ್ಮಜನ ದ್ವಾರ ದ್ವೈಪಾಯನ ಸರೋವರದ ಬಳಿ ಆಗಮಿಸಿ ದುರ್ಯೋಧನನಿಗೆ ಕ್ರೂರ ಮಾತುಗಳಿಂದ ನಿಂದಿಸಲು ಪ್ರಚೋದಿಸಿದನು. ಧರ್ಮಜನ ಮಾತಿನಿಂದ ರೊಚ್ಚಿಗೆದ್ದ ದುರ್ಯೋಧನನು ಮರ್ಯಾದೆಯ ರಕ್ಷಣೆಗಾಗಿ ಪಾಂಡವರ ವಿರುದ್ಧ ಯುದ್ಧಕ್ಕೆ ನಿಂತನು. ಈ ಪ್ರಸಂಗದಲ್ಲಿ ದುರ್ಯೋಧನನನ್ನು ಸಂಹರಿಸುವುದಾಗಿ ಪ್ರತಿಜ್ಞೆ ಮಾಡಿದ ಭೀಮಸೇನನು ದುರ್ಯೋಧನನನ್ನು ಎದುರಿಸಿದನು. ಇವರೀರ್ವರಿಗೆ ಆಶ್ಚರ್ಯಕರವಾದ ಯುದ್ಧವೇ ಏರ್ಪಟ್ಟಿತು. ಇದೇ ಪ್ರಸಂಗದಲ್ಲಿ ಬಲರಾಮನು ಅವರನ್ನು ತಡೆಯಲು ಪ್ರಯತ್ನಿಸಿದರೂ ಕೃಷ್ಣನ ಪ್ರೇರಣೆಯಂತೆ ಯುದ್ಧವು ಮುಂದುವರೆಯಿತು. ಈ ಯುದ್ಧದ ಪ್ರಸಂಗದಲ್ಲಿ ಭೀಮನ ಪ್ರತಿಜ್ಞೆಯನ್ನು ಭಗ್ನಗೊಳಿಸಬೇಕೆಂದು, ವಂಚಿಸಬೇಕೆಂದು ದುರ್ಯೋಧನನು ತನ್ನ ದೇಹವನ್ನೇ ತಲೆಕೆಳಗಾಗಿ ಮಾಡಿ ಯುದ್ಧ ಮಾಡಲಾರಂಭಿಸಿದನು. ಈ ಪ್ರಸಂಗದಲ್ಲಿ ಭೀಮನು ಕೃಷ್ಣನ ಅಪ್ಪಣೆಯಂತೆ ದುರ್ಯೋಧನನ ಪೃಷ್ಠಮೂಲದಲ್ಲಿ ಗದೆಯಿಂದ

ಅಪ್ಪಳಿಸಿದನು. 'ಪೃಷ್ಠಮೂಲೇ ಅಹನದ್‌ಭೀಮೋ ಭಿನ್ನಸಕ್ತಿಶ್ಚ ಸೋಪತತ್' ಎನ್ನುತ್ತಾರೆ ಶ್ರೀಮದಾಚಾರ್ಯರು. ಭೀಮನು ತನ್ನ ಪ್ರತಿಜ್ಞಾ ಪಾಲನೆಗಾಗಿ ನಾಭಿಯ ಮೇಲೂ ಅಲ್ಲದೆ, ಕೆಳಕ್ಕೂ ಅಲ್ಲದೆ ಮಧ್ಯದಲ್ಲಿ ಪ್ರಹರಿಸಿದನು. ಗದಾ ಯುದ್ಧದ ನಿಯಮವನ್ನು ಪಾಲಿಸಿ ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಳ್ಳಬೇಕೆಂದು ಪೃಷ್ಠದ ಮೂಲದಲ್ಲಿ ಹೊಡೆದು ಎರಡು ತೊಡೆಗಳನ್ನು ಮುರಿದನು. ಪುನಃ ದ್ಯೂತದಲ್ಲಿ ಕೃಷ್ಣನನ್ನು ಪಣವಾಗಿರಿಸು ಎಂದು ದುರ್ಯೋಧನನು ಸಭೆಯಲ್ಲಿ ನುಡಿದಾಗ ಭೀಮನು ಇಂತಹ ಕೆಟ್ಟ ಆಲೋಚನೆ ಮಾಡಿದ ದುರ್ಯೋಧನನ ತಲೆಯನ್ನು ರಣರಂಗದಲ್ಲಿ ತುಳಿಯುತ್ತೇನೆಂದು ಪ್ರತಿಜ್ಞೆ ಮಾಡಿದ್ದನು. ಅದಕ್ಕನುಗುಣವಾಗಿ ದುರ್ಯೋಧನನ ತಲೆಯನ್ನು ತುಳಿಯುತ್ತಾ 'ವೃಷಭಂ ಮಾ ಸಮಾನಾನಾಂ' ಎಂಬ ವೃಷಭ ಸೂಕ್ತವನ್ನು ಕಂಡುಕೊಂಡನು. ಇಷ್ಟು ಕಥೆಯು ನಮ್ಮೆಲ್ಲರಿಗೂ ತಿಳಿದಿದೆ. ರಣರಂಗದಲ್ಲಿ ಭೀಮನ ಈ ಕ್ರೌರ್ಯವನ್ನು ದುರ್ಯೋಧನನ ಅವನತಿಯನ್ನು ಕಂಡು ಬಲರಾಮನಿಗೆ ಕೋಪವು ತಡೆಯಲಾಗಲಿಲ್ಲ. ಭೀಮಸೇನನು ಧರ್ಮಯುದ್ಧವನ್ನು ಮಾಡಿಲ್ಲ ಎಂದು ಎರಡು ತೋಳುಗಳನ್ನೂ ಮೇಲಕ್ಕೆ ಎತ್ತಿ ಗಟ್ಟಿಯಾಗಿ ಕಿರುಚಿಕೊಳ್ಳುತ್ತಾನೆ. ಇಷ್ಟೇ ಅಲ್ಲದೆ ಸಿಟ್ಟಿನಿಂದ ಮುಸಲವನ್ನು ಧರಿಸಿ ಭೀಮನನ್ನೇ ಹೊಡೆಯಲು ಮುನ್ನುಗ್ಗುತ್ತಾನೆ. ಈ ಪ್ರಸಂಗದಲ್ಲಿ ಬಲರಾಮನನ್ನು ಕುರಿತು ಕೃಷ್ಣನೇ ಸಮಾಧಾನ ಪಡಿಸುತ್ತಾನೆ. ಮಂಡಲಾಕಾರದಲ್ಲಿ, ಪರಿಭ್ರಮಣ ಹೊಂದುವ ಕಾಲದಲ್ಲಿ, ಅಭಿಮುಖವಾಗಿ ಯುದ್ಧವನ್ನು ಮಾಡುವ ಕಾಲದಲ್ಲಿ, ಹಿಮ್ಮುಖವಾಗಿ ಸಾಗುವ ಕಾಲದಲ್ಲಿ ನಾಭಿಯಿಂದ ಕೆಳಭಾಗವನ್ನು ಹೊಡೆಯಬಾರದು ಎಂಬುದು ಯುದ್ಧದ ನಿಯಮವಾದರೂ ಈ ಮೂರು ಪ್ರಸಂಗದಲ್ಲಿ ವಂಚನೆಯನ್ನು ಮಾಡಿದರೆ ಅವನನ್ನು ನಾಭಿಯಿಂದ ಕೆಳಭಾಗದಲ್ಲಿ ಪ್ರಹರಿಸಬಹುದು. ತಲೆಕೆಳಗಾಗಿ ಯುದ್ಧ ಮಾಡುತ್ತಾ ಭೀಮನನ್ನು ವಂಚಿಸಿದ ದುರ್ಯೋಧನನನ್ನು ಹೀಗೆ ಹೊಡೆದಿರುವುದು ಧರ್ಮಸಮ್ಮತವೇ ಆಗಿದೆ ಎಂದು ಕೃಷ್ಣನು ಉತ್ತರಿಸುತ್ತಾನೆ. ವಾಸ್ತವಿಕವಾಗಿ ಭೀಮಸೇನನು ದುರ್ಯೋಧನನಿಗೆ ನಾಭಿಯಿಂದ ಕೆಳಗೆ ಹೊಡೆಯಲಿಲ್ಲ. ನಾಭಿಯ ಮೇಲ್ಭಾಗದಲ್ಲೂ ಹೊಡೆಯದೇ ಮಧ್ಯದ ಭಾಗದಲ್ಲಿಯೇ ಹೊಡೆದಿರುತ್ತಾನೆ. 'ನಾದಸ್ಥಾತ್ ಮಧ್ಯಯೇವಾಸೋ ನಿಜಧನೇತಂ ವೃಕೋದರಃ' ಎನ್ನುತ್ತಾರೆ ಶ್ರೀಮದಾಚಾರ್ಯರು. ಆದರೆ ಈ ಸತ್ಯವನ್ನು ಬಲರಾಮನಿಗೆ ಕೃಷ್ಣನು ಹೇಳದೆ ವಂಚಕರಾದವರನ್ನು ನಾಭಿಯ ಕೆಳಭಾಗವನ್ನು ಹೊಡೆಯುವುದು ಧರ್ಮವೇ ಆಗಿದೆ ಎಂದು ಹೇಳುತ್ತಾನೆ. ಅಧರ್ಮ ಮಾಡುವ ಜನರನ್ನು ಧರ್ಮದಿಂದ ಕೊಲ್ಲಬಾರದು. ದೇವತೆಗಳೂ ವಂಚನೆಯಿಂದಲೇ ಅಸುರರನ್ನು ಸಂಹರಿಸಿದ್ದಾರೆ. ಆದ್ದರಿಂದ ದುರ್ಯೋಧನನು ಅಧರ್ಮದಿಂದ ಸತ್ತಿದ್ದಾನೆ. ದೋಷವೇನೂ ಇಲ್ಲ.

ಪ್ರತಿಜ್ಞಾ ಪಾಲನೆಯ ದೃಷ್ಟಿಯಿಂದ ಭೀಮನು ಅವನ ತೊಡೆಗಳನ್ನು ಮುರಿದಿರುತ್ತಾನೆ. ಅವನ ಪಾಪಕ್ಕೆ ಯೋಗ್ಯವಾದ ಧಾರ್ಮಿಕ ಪ್ರತಿಜ್ಞೆಯನ್ನೇ ಭೀಮ ಮಾಡಿರುತ್ತಾನೆ. ಆದ್ದರಿಂದ ಯಾವ ಅನ್ಯಾಯವೂ ನಡೆದಿಲ್ಲ. ಭೀಮನು ಮಾಡಿದ್ದು ಧರ್ಮವೇ ಆಗಿದೆ ಎಂದು ಬಲರಾಮನ ಬಳಿ ಕೃಷ್ಣನು ವಿವರಿಸಿದಾಗ ಧರ್ಮರಾಜನಿಗೆ ಸಂಶಯ ಉಂಟಾಗುತ್ತದೆ. ದುರ್ಯೋಧನನು ಭೀಮನು ಅಧರ್ಮದಿಂದಲೇ ಹೊಡೆದು ಸಂಹರಿಸಿದ್ದಾನೆ ಎಂದು ಭಾವಿಸಿಕೊಳ್ಳುತ್ತಾನೆ. ಧರ್ಮಜಟಿಲವಾದ ಪ್ರಸಂಗವು ಇದೇ ಆಗಿದೆ. ವಸ್ತುತಃ ಭೀಮನು ನಾಭಿಯ ಕೆಳಭಾಗದಲ್ಲಿ ಹೊಡೆಯದೆ ಕೃಷ್ಣನ ಆಜ್ಞೆಯಂತೆ ಧರ್ಮಯುದ್ಧದಿಂದಲೇ ಸಂಹರಿಸಿದ್ದರೂ ಕೃಷ್ಣನು ಈ ಸತ್ಯವನ್ನು ಬಲರಾಮನ ಮುಂದೆ ಸ್ಪಷ್ಟಪಡಿಸಲಿಲ್ಲ ಎಂದು ತೋರುತ್ತದೆ. ಇದಕ್ಕೆ ಶ್ರೀಮದಾಚಾರ್ಯರು ಎರಡು ಕಾರಣಗಳನ್ನು ನೀಡಿದ್ದಾರೆ. ಒಂದು ಅಯೋಗ್ಯರಲ್ಲಿ ಅಧರ್ಮ ಯುದ್ಧವೂ ಧರ್ಮವಾಗುತ್ತದೆ. 'ಕ್ಷಮಾ ಸರ್ವತ್ರ ಧರ್ಮೋನ ಪಾಪಹೇತುಶ್ಚ ದುರ್ಜನೇ' ಎಂಬ ನೀತಿಯನ್ನು ತಿಳಿಸಿದ್ದಾರೆ. ಜೊತೆಗೆ ಭೂಭಾರಹರಣದ ಸಮಗ್ರ ಪುಣ್ಯವು ಭೀಮನಿಗೆ ಮಾತ್ರ ದೊರೆಯಬೇಕು. ಸಂಶಯದಿಂದ ಧರ್ಮಾನುಷ್ಠಾನ ಮಾಡಿದವರಿಗೆ ಪೂರ್ಣ ಪುಣ್ಯವು ದೊರೆಯಲಾಗದು. ಧರ್ಮಜನು ಈ ಸಮಗ್ರ ಪುಣ್ಯಕ್ಕೆ ಅರ್ಹನಲ್ಲ ಎಂಬ ಕಾರಣದಿಂದಲೇ ಅವನಿಗೆ ಸಂಶಯ ಹುಟ್ಟಲೆಂದೇ ಕೃಷ್ಣನು ಈ ವಿವರಣೆಯನ್ನು ನೀಡಿದ್ದಾನೆ. ಕೃಷ್ಣನ ವಿವರಣೆಯಲ್ಲಿ ಯಾವುದೇ ದೋಷವಿಲ್ಲದಿದ್ದರೂ ಧರ್ಮಜನು ತಪ್ಪಾಗಿ ಭಾವಿಸುತ್ತಾನೆ. ಭೀಮನ ಯುದ್ಧದಲ್ಲೇ ಆಗಲಿ, ಕೃಷ್ಣನ ವಿವರಣೆಯಲ್ಲಾಗಲಿ ಗೊಂದಲವಿಲ್ಲ ಎಂಬುದನ್ನು ಶ್ರೀಮದಾಚಾರ್ಯರು ಸ್ಪಷ್ಟಪಡಿಸುತ್ತಾ ಅವರವರ ಅರ್ಹತೆಗೆ ತಕ್ಕಂತೆ ಮಹಾಭಾರತದ ಕಥೆಗಳನ್ನು ಅರ್ಥೈಸಿಕೊಳ್ಳುತ್ತಾರೆ ಎನ್ನಲು ಧರ್ಮರಾಜನೂ ಒಂದು ನಿದರ್ಶನವಾಗಿದ್ದಾನೆ ಎನ್ನುವ ಮೂಲಕ ಮಹಾಭಾರತದ ಗೂಢಾರ್ಥಗಳು ದೇವತೆಗಳಿಗೂ ಅಗಮ್ಯವಾಗಿರುವಾಗ ಸಾಮಾನ್ಯರು ಇದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲಾಗದು ಎಂದು ಇದರ ಮಹತ್ವವನ್ನು ಈ ಪ್ರಸಂಗದಲ್ಲಿ ವಿಶೇಷವಾಗಿ ತಿಳಿಸಿಕೊಟ್ಟಿದ್ದಾರೆ. ಕೃಷ್ಣನಾದರೂ ಮುಂದೆ ಬಲರಾಮ, ಪ್ರಜೆಗಳು, ಅರ್ಜುನ, ಎಲ್ಲರಿಗೂ ಸಂಶಯ ಪರಿಹಾರವಾಗುವಂತೆ ಭೀಮನ ಗದಾ ಯುದ್ಧದ ಪ್ರಸಂಗವನ್ನು ನಿರೂಪಿಸಿದರೂ ಧರ್ಮರಾಜನ ಪಾಲಿಗೆ ಮಾತ್ರ ಇದರ ಪೂರ್ಣ ಮರ್ಮವನ್ನು ತಿಳಿಸಲಿಲ್ಲ.

ಹೀಗೆ ಮಹಾಭಾರತವು ಕೇವಲ ಕಥೆಯನ್ನು ಮಾತ್ರ ಹೇಳಿಕೊಂಡು ಹೋಗದೆ ಅತ್ಯಂತ ಸೂಕ್ಷ್ಮವಾದ ಧರ್ಮವನ್ನೂ ವಿಶ್ಲೇಷಿಸುತ್ತಾ ಸಾಗುತ್ತದೆ ಎಂದು ತಿಳಿಸಲು ಈ ಶಲ್ಯಪರ್ವವು ನಿದರ್ಶನವಾಗಿ ನಿಲ್ಲುತ್ತದೆ.

ಈ ಶಲ್ಯ ಮತ್ತು ಗದಾಪರ್ವಗಳನ್ನು ವಿದ್ವಾನ್ ಕೆ. ಗಣಪತಿ ಭಟ್ ಇವರು ಅತ್ಯಂತ ಸರಳವಾಗಿ ಮೂಲಶ್ಲೋಕಕ್ಕೆ ಅನುಗುಣವಾಗಿ, ಸುಂದರವಾಗಿ ಅನುವಾದಿಸಿ ಕೊಟ್ಟಿರುತ್ತಾರೆ. ಸಂಶೋಧಕರು, ವಿಮರ್ಶಕರು ಆದ ವಿದ್ವಾನ್ ಕೆ. ಗಣಪತಿ ಭಟ್ ಇವರಿಂದ ಈ ರೀತಿಯಾದ ಸತ್ಕರ್ಮಗಳು ನಿರಂತರ ನಡೆಯುತ್ತಿರಲೆಂದು ನಮ್ಮ ಉಪಾಸ್ಯ ಮೂರ್ತಿ ಶ್ರೀರಾಮಚಂದ್ರನಲ್ಲಿ ಪ್ರಾರ್ಥಿಸುತ್ತೇವೆ. ಇದರಂತೆ ಮಹಾಭಾರತ ಮೂಲಶೋಧನೆ, ವಿದ್ವಾಂಸರ ನಿರ್ವಹಣೆ ಮುಂತಾದ ಕಾರ್ಯಗಳಲ್ಲಿ ನಿರಂತರ ಪರಿಶ್ರಮವಹಿಸಿದ ಅನೇಕ ವಿದ್ವಾಂಸರನ್ನು ಭಗವಂತನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ. ಇದರಂತೆ ಸಮಗ್ರ ಮಹಾಭಾರತದ ಪ್ರಕಾಶನದ ಜವಾಬ್ದಾರಿಯನ್ನು ಹೊತ್ತಿರುವ ವಿದ್ವಾಂಸರಾದ ಬೆ.ನಾ.ವಿಜಯೀಂದ್ರಾಚಾರ್ಯರಿಗೂ ವಿಶೇಷವಾಗಿ ಶ್ರೀಹರಿವಾಯುಗುರುಗಳ ಅನುಗ್ರಹವನ್ನು ಬಯಸುತ್ತೇವೆ. ಇದರಲ್ಲಿ ಸಹಕರಿಸಿದ ಎಲ್ಲರಿಗೂ ಭಗವಂತನು ಸನ್ಮಂಗಳವನ್ನು ಉಂಟುಮಾಡಲಿ.

ನಾರಾಯಣ ಸ್ಮರಣೆಗಳು
ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು
ಶ್ರೀ ಪಲಿಮಾರು ಹೃಷೀಕೇಶ ಮಠ, ಉಡುಪಿ.

# ಪ್ರಕಾಶಕರ ನುಡಿ

ಹದಿನೆಂಟನೆಯ ದಿವಸದಲ್ಲಿ ಶಲ್ಯನು ಕೌರವ ಸೇನಾಧಿಪತಿಯಾಗಿ ಪಾಂಡವರನ್ನು ಎದುರಿಸುತ್ತಾನೆ. ಬಾಹು ಯುದ್ಧದಲ್ಲಿ ಪ್ರಸಿದ್ಧರಾದ ನಾಲ್ವರಲ್ಲಿ ಶಲ್ಯನೂ ಒಬ್ಬ. ಸಲ್ಹಾದನ ಅವತಾರನಾದ, ವಾಯು ಆವೇಷದಿಂದ ಯುಕ್ತನಾದ ಶಲ್ಯನು ಧರ್ಮಯುದ್ಧವನ್ನೇ ಮಾಡುತ್ತಾ ಧರ್ಮಜನಿಂದಲೇ ಯುದ್ಧದಲ್ಲಿ ಹತನಾಗುತ್ತಾನೆ. ಕೌರವ ಸೇನೆಯಲ್ಲಿ ಮಹಾರಥಿಕರೆಲ್ಲರೂ ಅಸುನೀಗಲು ಕಂಗಾಲಾದ ದುರ್ಯೋಧನನು ದುರ್ವಾಸರಿಂದ ನೀಡಲ್ಪಟ್ಟ ಮಂತ್ರವನ್ನು ಜಪಿಸಿ ಪುನಃ ಸಮಸ್ತ ಸೇನೆಯನ್ನು ಬದುಕಿಸಬೇಕೆಂದು ದ್ವೈಪಾಯನದ ಸರೋವರದ ಕಡೆ ಸಾಗುತ್ತಾನೆ. ಇಲ್ಲಿ ದುರ್ಯೋಧನನು ಪ್ರವೇಶಿಸಿದ್ದು ವೈಶಂಪಾಯನ ಸರೋವರ ಎಂದು ಪಂಪಭಾರತದಲ್ಲಿ ಪಂಪನು ಉಲ್ಲೇಖಿಸಿದ್ದಾನೆ. ಆದರೆ ಮೂಲಮಹಾಭಾರತದಲ್ಲಿ ಎಲ್ಲಿಯೂ ಈ ಸರೋವರದ ಉಲ್ಲೇಖವು ಇರುವುದಿಲ್ಲ. ದ್ವೈಪಾಯನ ಸರೋವರವೇ ದುರ್ಯೋಧನನು ಪ್ರವೇಶಿಸಿದ ಸರೋವರವು. ಕಾಲಿಕವಾಗಿ ಅನೇಕ ಕಥಾ ವ್ಯತ್ಯಾಸಗಳು ನಡೆದಿದೆ ಎಂದು ತಿಳಿಯಬಹುದು. ಸರೋವರದಲ್ಲಿ ಅಡಗಿ ಕುಳಿತ ದುರ್ಯೋಧನನನ್ನು ಧರ್ಮರಾಜನು ಪ್ರಚೋದಿಸಿ ಯುದ್ಧಕ್ಕೆ ಆಹ್ವಾನಿಸಿದಾಗ ಅನಿವಾರ್ಯವಾಗಿ ದುರ್ಯೋಧನನು ಭೀಮನೊಂದಿಗೆ ಸೆಣೆಸಾಡಿ ಅಸುನೀಗುತ್ತಾನೆ. ಪಾಪಿಗಳಲ್ಲಿ ಪಾಪಿಯಾದ ದುರ್ಯೋಧನನು ಪ್ರಾಣ ಹೋಗುವ ಸಮಯದಲ್ಲಿಯೂ ಪಶ್ಚಾತ್ತಾಪವನ್ನು ಪಡದೆ ತಾನು ಮಾಡಿದ್ದೆಲ್ಲವೂ ಒಳ್ಳೆಯದ್ದೇ ಆಗಿದೆ ಎಂದು ಭಾವಿಸುತ್ತಾನೆ.

ಕೃಷ್ಣನು ಗೀತೆಯಲ್ಲಿ–

**'ಈಶ್ವರೋಽಹಮಹಂ ಭೋಗಿ ಸಿದ್ಧೋಽಹಂ ಬಲವಾನ್ ಸುಖೀ ।**
**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥**

**ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥**

ಎಂದು ತಾಮಸರ ಸ್ವಭಾವವನ್ನು ವರ್ಣಿಸಿದ್ದಾನೆ. ಈ ದುರ್ಗುಣಗಳಿಗೆ

ನಿದರ್ಶನವಾಗಿದ್ದಾನೆ ದುರ್ಯೋಧನ. ತಾನು ಸಾಯುವ ಸಮಯದಲ್ಲಿ ತನ್ನ ಯಾವ ತಪ್ಪನ್ನೂ ಎಣಿಸದೆ- 'ನಾನು ಯಜ್ಞಗಳನ್ನಾಚರಿಸಿದ್ದೇನೆ. ಪುಣ್ಯಕರ್ಮಗಳನ್ನು ಮಾಡಿದ್ದೇನೆ. ಶತ್ರುಗಳನ್ನು ಸಂಹರಿಸಿದ್ದೇನೆ. ಯುದ್ಧಭೂಮಿಯಲ್ಲಿಯೇ ಸನ್ಮರಣವನ್ನು ಹೊಂದಿದ್ದೇನೆ. ಸಮಸ್ತ ಭೋಗಗಳನ್ನು ಅನುಭವಿಸಿದ್ದೇನೆ. ಆದ್ದರಿಂದ ಎಲ್ಲರಿಗಿಂತ ಶ್ರೇಷ್ಠವಾದ ಗತಿಯನ್ನೇ ನಾನು ಹೊಂದುತ್ತೇನೆ. ಪಾಂಡವರೆಲ್ಲರೂ ಕಪಟ ಯುದ್ಧವನ್ನು ಮಾಡಿ ದುಃಖ ಭಾಗಿಗಳಾಗುತ್ತಾರೆ. ರತ್ನಹೀನ ವಸುಂಧರೆಯನ್ನು ಪಾಂಡವರು ಅನುಭವಿಸಲಿ' ಎಂದು ಹೇಳುವ ಪ್ರಸಂಗದಲ್ಲಿಯೇ ದುರ್ಯೋಧನನ ಮೇಲೆ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸುತ್ತಾರೆ. ಈ ಎಲ್ಲ ಪ್ರಸಂಗವನ್ನು ಕಂಡಾಗ ಯಾವುದು ಧರ್ಮ? ಯಾವುದು ಅಧರ್ಮ? ಎಂಬುದೇ ಓದುಗರಿಗೆ ಗೊಂದಲವಾಗುತ್ತದೆ. ಶ್ರೀಮದಾಚಾರ್ಯರು ಈ ಪ್ರಸಂಗದಲ್ಲಿ ದುಷ್ಟರಿಗೆ ವಿಪರೀತ ಬುದ್ಧಿಯಲ್ಲಿಯೇ ದಾರ್ಢ್ಯವನ್ನು ಹುಟ್ಟಿಸಲು ತನ್ಮೂಲಕ ಗಾಢವಾದ ಅಂಧಃತಮಸ್ಸಿನಲ್ಲಿ ಪತನ ಹೊಂದಬೇಕು ಎಂಬುದು ದೇವತೆಗಳ ಪುಷ್ಪವೃಷ್ಟಿಯ ಉದ್ದೇಶವಾಗಿದೆ. ಆತ್ಮ ಪ್ರಶಂಸೆಯನ್ನು ಮಾಡಿಕೊಳ್ಳುತ್ತಾ ಹರಿಭಕ್ತರನ್ನು, ಶ್ರೀಹರಿಯನ್ನು ನಿಂದಿಸಿದವರಿಗೆ ಅಂಧಃತಮಸ್ಸಲ್ಲದೆ ಬೇರೆ ಯಾವ ಗತಿಯೂ ಇರುವುದಿಲ್ಲ. ಎಲ್ಲ ವಿಧವಾದ ಅನರ್ಥಗಳನ್ನು ಮಾಡಿದ ದುರ್ಯೋಧನನಿಗೆ ನಿತ್ಯ ದುಃಖವು ತಪ್ಪಿದ್ದಲ್ಲ. ದುರ್ಯೋಧನನು ಸತ್ಫಲವನ್ನು ಹೊಂದಿದರೆ ಕತ್ತಲೆಯೂ ಸೇರಿನಂತೆ ಬೆಳಗಬೇಕಾದೀತು ಎನ್ನುತ್ತಾನೆ ಶ್ರೀಕೃಷ್ಣ. ಹೀಗೆ ಆಯಾ ಜೀವರ ಯೋಗ್ಯತೆಗೆ ತಕ್ಕಂತೆ ಸಾಧನೆಯನ್ನು ಮಾಡಿಸಲು ವೇದಿಕೆಯನ್ನು ಕಲ್ಪಿಸುವುದು ಭಗವಂತನ ಸಂಕಲ್ಪವಾಗಿದೆ. ಹೀಗೆ ಮಹಾಭಾರತವು ಸಾತ್ವಿಕ, ತಾಮಸರ ಅರ್ಹತೆಗಳೇನೆಂದು ತಿಳಿಸಲು ಕೌರವ- ಪಾಂಡವರ ಕಥೆಯನ್ನು ಮಾಧ್ಯಮವನ್ನಾಗಿಸಿಕೊಂಡಿದೆ ಎಂಬ ಮರ್ಮವನ್ನು ಶ್ರೀಮದಾಚಾರ್ಯರು ಈ ಪ್ರಸಂಗದಲ್ಲಿ ತಿಳಿಸಿಕೊಟ್ಟಿರುತ್ತಾರೆ. ಇಂತಹ ತಾತ್ವಿಕ ವಿಚಾರಗಳಿಂದ ರಮಣೀಯವಾಗಿ ಹೊರಹೊಮ್ಮಿರುವ ಮಹಾಭಾರತ ಶಲ್ಯಪರ್ವದ ಕನ್ನಡಾನುವಾದವನ್ನು ಪೂರೈಸಿಕೊಟ್ಟಿರುವ ವಿದ್ವಾನ್ ಕಡಂದಲೆ ಗಣಪತಿ ಭಟ್ ಇವರನ್ನು ತತ್ವಸಂಶೋಧನ ಸಂಸತ್ ವತಿಯಿಂದ ವಿಶೇಷವಾಗಿ ಅಭಿನಂದಿಸುತ್ತೇವೆ.

ಪ್ರಾತಃಸ್ಮರಣೀಯರಾದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ಪರಮಾನುಗ್ರಹದಿಂದ ಶ್ರೀಮನ್ಮಹಾಭಾರತದ ಶುದ್ಧಪಾಠದ ಮುದ್ರಣವೆಂಬ ಮಹತ್ಕಾರ್ಯವನ್ನು

ಕೈಗೆತ್ತಿಕೊಂಡು, ಅದಕ್ಕೆ ಸಂಬಂಧಪಟ್ಟ ವಿದ್ವಾಂಸರನ್ನು ಒಟ್ಟುಗೂಡಿಸಿ, ಪ್ರಾಚೀನ ಹಸ್ತಪ್ರತಿಗಳ ಸಂಶೋಧನೆಯನ್ನು ಮಾಡಿಸಿ, ಆಧ್ಯಾತ್ಮಿಕ ಹಾಗೂ ಸಾಮಾಜಿಕ ಸಮಾಜಕ್ಕೆ ದೊಡ್ಡ ಕೊಡುಗೆಯನ್ನು ನೀಡುತ್ತಿದ್ದಾರೆ ನಮ್ಮ ಗುರುಗಳಾದ ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರು. ಆ ನಿಟ್ಟಿನಲ್ಲಿ ಈಗ ಶಲ್ಯ ಹಾಗೂ ಗದಾಪರ್ವದ ಭಾಗವನ್ನು ಅರ್ಥಸಹಿತ ಒಂದು ಸಂಪುಟದಲ್ಲಿ ಲೋಕಾರ್ಪಣೆ ಮಾಡುತ್ತಿದ್ದೇವೆ. ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರ ಮಹತ್ಸಂಕಲ್ಪವಾದ ಶ್ರೀಮಹಾಭಾರತ ಮುದ್ರಣವು ಅವರೇ ಹುಟ್ಟುಹಾಕಿದ ತತ್ತ್ವಸಂಶೋಧನ ಸಂಸತ್ತಿನಿಂದ ಆಗಬೇಕೆಂದು ಶ್ರೀಪಾದರು ಸಂಕಲ್ಪಿಸಿದ್ದಾರೆ. ಅದು ಕೂಡ ಶ್ರೀಪಾದರ ದ್ವಿತೀಯ ಶ್ರೀಕೃಷ್ಣಪೂಜಾ ಪರ್ಯಾಯದ ಶುಭಾವಸರದಲ್ಲಿ ಬಿಡುಗಡೆಗೊಳ್ಳುತ್ತಿರುವುದು ಯೋಗವೇ ಸರಿ. ಈ ನಮ್ಮ ಸಂಸ್ಥೆಯ ಎಲ್ಲಾ ವಿಷಯಗಳಲ್ಲಿ ತಮ್ಮ ಸಂಪೂರ್ಣ ಅನುಗ್ರಹವನ್ನು ಧಾರೆಯೆರೆದ ನಮ್ಮ ಸಂಸ್ಥೆಯ ಕುಲಪತಿಗಳಾದ ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರಿಗೆ ಹೃತ್ಪೂರ್ವಕ ಅನಂತ ನಮೋವಾಕ್ಕುಗಳನ್ನು ಸಮರ್ಪಿಸುತ್ತಿದ್ದೇನೆ.

ಅದೇ ರೀತಿಯಲ್ಲಿ ಇಂತಹ ಅದ್ಭುತವಾದ ಈ ಕೃತಿ ಹೊರಬರಲು ಆರ್ಥಿಕವಾಗಿ ಎಲ್ಲ ರೀತಿಯ ಸಹಕಾರ ನೀಡಿರುವಂತಹ ನಮ್ಮ ಘನವೆತ್ತ ಕರ್ನಾಟಕ ಸರ್ಕಾರಕ್ಕೆ, ಅದರ ಎಲ್ಲ ಪದಾಧಿಕಾರಿಗಳಿಗೆ ಸಂಶೋಧನ ಸಂಸತ್‌ನ ಪರವಾಗಿ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಶಲ್ಯಪರ್ವದ ಮುದ್ರಣಕ್ಕೆ ಬೇಕಾದ ಧನವನ್ನು ನಮ್ಮವರೇ ಆದ ಶ್ರೀಯುತ ಅರವಿಂದ ಗಂಭೀರ್ ಶ್ರೀಮತಿ ಪರಿಮಳಾ ದಂಪತಿಗಳು ನೀಡಿರುತ್ತಾರೆ. ಬೆಂಗಳೂರಿನಲ್ಲಿ ಗಂಭೀರ್ ಟ್ಯೂಟರ್ ಪಾಡ್ ಪ್ರೈವೇಟ್ ಲಿಮಿಟಡ್ (GTPL) ಸಂಸ್ಥೆಯನ್ನು ಸ್ಥಾಪಿಸಿ ನೂರಾರು ಮಕ್ಕಳಿಗೆ ಶಿಕ್ಷಣವನ್ನು ನೀಡುತ್ತಿದ್ದಾರೆ. ನಮ್ಮ ಪ್ರಕಾಶನಕ್ಕೆ ಉದಾರವಾದ ಸೇವೆಯನ್ನು ಸಲ್ಲಿಸಿದ ಉದಾರಿಗಳೂ, ಧರ್ಮನಿಷ್ಠರೂ ಆದ ಕುಮಾರಿ ತತ್ತ್ವಮಂಜರೀ, ಕುಮಾರಿ ಮಾಯಾ ಎಂಬ ಮಕ್ಕಳಿಂದ ಕೂಡಿರುವ ಇವರ ಕುಟುಂಬಕ್ಕೆ ಭಗವಂತನು ವಿಶೇಷವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಅದೇ ರೀತಿಯಲ್ಲಿ ಈ ಶ್ರೀಮಹಾಭಾರತ ಶುದ್ಧಪಾಠದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು, ಸಮರ್ಥವಾಗಿ ಆ ಯೋಜನೆ ಕಾರ್ಯಗತ ಆಗುವಲ್ಲಿ ಪೂರ್ಣಪ್ರಮಾಣದಲ್ಲಿ ಶ್ರಮಿಸುತ್ತಿರುವ ನಮ್ಮ ನಾಡಿನ ಖ್ಯಾತ ಪ್ರವಚನಕಾರರೂ,

ವಿದ್ವಾಂಸರೂ ಆಗಿರುವಂತಹ ಡಾ।। ಬೆ.ನಾ. ವಿಜಯೀಂದ್ರಾಚಾರ್ಯರಿಗೆ ಮತ್ತು ಇದಕ್ಕಾಗಿ ಶ್ರಮವಹಿಸಿದ ಎಲ್ಲಾ ವಿದ್ವನ್ಮಣಿಗಳಿಗೆ ಸಂಸ್ಥೆಯ ಪರವಾಗಿ ಧನ್ಯವಾದಗಳು.

ಶ್ರೀಮಹಾಭಾರತದ ಮುದ್ರಣದ ಬೃಹತ್ ಯೋಜನೆಯಲ್ಲಿ ಈ ಇಳಿ ವಯಸ್ಸಿನಲ್ಲಿಯೂ ನಮ್ಮ ಜೊತೆಗೇ ಇದ್ದುಕೊಂಡು ಸಂಪೂರ್ಣ ಸಹಕಾರವನ್ನು ನೀಡುತ್ತಿರುವ ಶ್ರೀಯುತ ರಘುಪತಿ ತಂತ್ರಿ ಇವರಿಗೂ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಧನ್ಯವಾದಗಳು. ಮೂಲ ಸಂಸ್ಕೃತ ಶ್ಲೋಕಗಳನ್ನು ದೋಷರಹಿತವಾಗಿ ಕನ್ನಡಕ್ಕೆ ಲಿಪ್ಯಂತರವನ್ನು ಮಾಡಿಕೊಟ್ಟು ಹಾಗೂ ಪುಟ ಸಂಯೋಜನೆಯನ್ನು ಮಾಡಿದ ಶ್ರೀಯುತ ಶರತ್‌ಚಂದ್ರ ಎಂ., ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್ ಅವರಿಗೂ ಸಂಸ್ಥೆಯ ಪರವಾಗಿ ಧನ್ಯವಾದಗಳು. ಹಾಗೆಯೇ ತಿದ್ದುಪಡಿಯಲ್ಲಿ ಸಹಕಾರ ಮಾಡಿಕೊಟ್ಟಿರುವ ಶ್ರೀಯುತ ಶ್ರೀವತ್ಸ ಆಚಾರ್ಯ (ಸಿದ್ಧಾಂತಿ) ಇವರಿಗೂ ಧನ್ಯವಾದಗಳು. ಹಾಗೆಯೇ ನಮಗೆ ಬೇಕಾದ ಕ್ಲಪ್ತ ಸಮಯದಲ್ಲಿ ಸುಂದರವಾಗಿ ಮುದ್ರಣವನ್ನು ಮಾಡಿಕೊಟ್ಟಿರುವ ಪವನ್ ಪ್ರಿಂಟರ್ಸ್‌ನ ಮಂಜುನಾಥ್‌ರವರಿಗೂ ನಮ್ಮ ಸಂಸ್ಥೆಯ ಪರವಾಗಿ ವಿಶೇಷ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇವೆ. ಈ ಕಾರ್ಯದಲ್ಲಿ ಶ್ರಮಿಸಿದ ಸಂಶೋಧನ ಮಂದಿರದ ಎಲ್ಲಾ ಕಾರ್ಯಕಾರಿಣಿ ವರ್ಗಕ್ಕೂ ಈ ಮೂಲಕ ಧನ್ಯವಾದಗಳನ್ನು ಸಮರ್ಪಿಸುತ್ತಿದ್ದೇನೆ.

ಈ ಶಲ್ಯಪರ್ವದ ಅಧ್ಯಯನವನ್ನು ಮಾಡಿ ತನ್ಮೂಲಕ ಸಾಧನೆ ಮಾರ್ಗವನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಭಗವಂತನನ್ನು ಒಲಿಸಿಕೊಳ್ಳುವುದರ ಬಗ್ಗೆ ಅವನ ಸಂಕಲ್ಪಕ್ಕೆ ಅನುಗುಣವಾಗಿ ಅವನ ಪ್ರೇರಣೆಯಂತೆ ಎಲ್ಲರೂ ಕೈ ಜೋಡಿಸುವ ಮೂಲಕ ಶ್ರೀಕೃಷ್ಣನ ಕೃಪಾಕಟಾಕ್ಷಕ್ಕೆ ಪಾತ್ರರಾಗೋಣ ಎಂದು ಅಪೇಕ್ಷಿಸುತ್ತಿದ್ದೇನೆ.

**ಪ್ರಕಾಶಕರು**

**ಡಾ. ವಂಶೀಕೃಷ್ಣಾಚಾರ್ಯ ಪುರೋಹಿತ್**

**ನಿರ್ದೇಶಕರು, ತತ್ವಸಂಶೋಧನಸಂಸತ್,**

**ಶ್ರೀ ಪಲಿಮಾರು ಹೃಷೀಕೇಶ ಮಠ, ಉಡುಪಿ.**

# ಪರ್ವದ ಸಾರಾಂಶ

ಶಲ್ಯಪರ್ವವು ಮಹಾಭಾರತದ ಒಂಬತ್ತನೆಯ ಪರ್ವ. ಇದರಲ್ಲಿ ಅವಾಂತರ ಉಪಪರ್ವಗಳಾಗಿ ಶಲ್ಯವಧಪರ್ವ, ಹ್ರದಪ್ರವೇಶಪರ್ವ, ತೀರ್ಥಯಾತ್ರಾಪರ್ವ ಮತ್ತು ಗದಾಯುದ್ಧಪರ್ವಗಳು ಉಲ್ಲೇಖಗೊಂಡಿವೆ.

**ಶಲ್ಯವಧಪರ್ವ :**

ಮಹಾಭಾರತದ ಹದಿನೆಂಟು ದಿನದ ಯುದ್ಧದಲ್ಲಿ ಹದಿನೇಳು ದಿನಗಳ ಯುದ್ಧವು ಮುಗಿದಾಗ ಕರ್ಣನು ಹತನಾಗಿದ್ದ. ಕೌರವರ ಸೈನ್ಯದ ಮಹಾವೀರರೆಲ್ಲರೂ ನಾಶವಾದ ಸಂದರ್ಭದಲ್ಲಿ ಹದಿನೆಂಟನೆಯ ಯುದ್ಧಕ್ಕಾಗಿ ದುರ್ಯೋಧನನು ಮದ್ರದೇಶದ ಚಕ್ರವರ್ತಿಯಾದ ಶಲ್ಯಮಹಾರಾಜನನ್ನು ಸೇನಾಧಿಪತಿಯನ್ನಾಗಿ ಪಟ್ಟಾಭಿಷೇಕಮಾಡುತ್ತಾನೆ. ಶಲ್ಯನು ಹದಿನೆಂಟನೆಯ ದಿನದ ಆ ಯುದ್ಧದಲ್ಲಿ ಧರ್ಮರಾಜನ ಕೈಯಲ್ಲಿ ಹತನಾಗುತ್ತಾನೆ.

ಶಲ್ಯನು ಮಹಾಭಾರತದಲ್ಲಿ ಬರುವ ಒಂದು ವಿಶಿಷ್ಟಪಾತ್ರನಾಗಿದ್ದಾನೆ. ಇವನ ಬಗ್ಗೆ ಶ್ರೀಮದಾಚಾರ್ಯರು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಹೀಗೆ ಉಲ್ಲೇಖಿಸಿದ್ದಾರೆ.

**ಅಥ ಚಾರ್ತಾಯನನಾಮ ಮದ್ರೇಶಃ ಶಕ್ರತುಲ್ಯಪುತ್ರಾರ್ಥೀ ।**
**ಕನ್ಯಾರತ್ನಂ ಚೇಚ್ಛಂಶ್ಚಕ್ರೇ ಬ್ರಾಹ್ಮಂ ತಪೋ ವರಂ ಚಾಽಪ ॥**

**ಪ್ರಹ್ಲಾದಾವರಜೋ ಯಃ ಸಹ್ಲಾದೋ ನಾಮತೋ ಹರೇರ್ಭಕ್ತಃ ।**
**ಸೋಽಭೂತ್ ಬ್ರಹ್ಮವರಾನ್ತೇ ವಾಯೋರಾವೇಶಯುಕ್ ಸುತೋ ರಾಜ್ಞಃ॥**

– ಮ.ಭಾ.ತಾ.ನಿ – 11–157, 158

**ಸ ಮಾರುತಾವೇಶವಶಾತ್ ಪೃಥಿವ್ಯಾಂ ಬಲಾಧಿಕೋಽಭೂದ್ ವರತಶ್ಚ ಧಾತುಃ।**
**ಶಲ್ಯಶ್ಚ ನಾಮ್ನಾಽಖಿಲಶತ್ರುಶಲ್ಯೋ ಬಭೂವ ಕನ್ಯಾಽಸ್ಯ ಮಾದ್ರಿನಾಮ್ನೀ ॥**

ಮದ್ರದೇಶದ ಅಧಿಪತಿ ಋತಾಯನಮಹಾರಾಜನು, ಪರಾಕ್ರಮದಲ್ಲಿ ಇಂದ್ರಸದೃಶನಾದ ಪುತ್ರಪ್ರಾಪ್ತಿಗಾಗಿ ಮತ್ತು ಇನ್ನೊಂದು ಪುತ್ರಿಯನ್ನು ಪಡೆಯುವ ಇಚ್ಛೆಯಿಂದ ಚತುರ್ಮುಖಬ್ರಹ್ಮದೇವರನ್ನು ಕುರಿತು ತಪಸ್ಸನ್ನಾಚರಿಸಿದನು. ತಪಸ್ಸಿಗೆ ಒಲಿದ ಬ್ರಹ್ಮದೇವರು ಇವನಿಗೆ ವರವನ್ನು ದಯಪಾಲಿಸಿದ್ದಾರೆ. ಬ್ರಹ್ಮದೇವರ

ವರಬಲದಿಂದಾಗಿ ಕರ್ಮಜದೇವತೆಯಾದ ಪ್ರಹ್ಲಾದನ ತಮ್ಮ ಸಹ್ಲಾದನು ಋತಾಯನರಾಜನಿಗೆ ಮಗನಾಗಿ ಅವತರಿಸುತ್ತಾನೆ. ಅವನೇ ಮಹಾಭಾರತದ ಶಲ್ಯ. ಶ್ರೀಹರಿಯ ಪರಮಭಕ್ತ. ಬ್ರಹ್ಮದೇವರ ವರಬಲ ಮತ್ತು ವಾಯುದೇವರ ವಿಶೇಷ ಆವೇಶದಿಂದಾಗಿ ಈತನು ಮಹಾಪರಾಕ್ರಮಿಯಾಗಿದ್ದನು. ಶತ್ರುಗಳಿಗೆ ಶಲ್ಯ (ಈಟಿಯಂತೆ) ದಂತೆ ಪ್ರಾಣಹಾರಕನಾಗಿದ್ದನು. ಶ್ರೀಕೃಷ್ಣನಿಂದ ಮಹಾರಥ ಎಂಬುದಾಗಿ ಗುರುತಿಸಿಕೊಂಡವನು.

ಶಲ್ಯನ ತಂಗಿಯಾದ ಮಾದ್ರಿಯನ್ನು ಪಾಂಡುರಾಜನು ವಿವಾಹವಾಗುತ್ತಾನೆ. ಅವಳಲ್ಲಿ ಹುಟ್ಟಿದ ಮಕ್ಕಳೇ ನಕುಲ ಮತ್ತು ಸಹದೇವರು.

ಯದ್ಯಪಿ ನಕುಲ ಸಹದೇವರ ಸೋದರಮಾವನಾದ ಇವನು ಪಾಂಡವರಪಕ್ಷದಲ್ಲಿ ಇದ್ದುಕೊಂಡು ಕೌರವರ ವಿರುದ್ಧವಾಗಿ ಕಾದಾಡಬೇಕಿತ್ತು. ಹಾಗಿದ್ದರೂ ಭಗವತ್ಸಂಕಲ್ಪವು ಬೇರೆನೇ ಆಗಿತ್ತು. ಮಹಾಭಾರತಯುದ್ಧದ ಸಿದ್ಧತೆಯ ಸಂದರ್ಭದಲ್ಲಿ ಮದ್ರರಾಜ ಶಲ್ಯನು ಪಾಂಡವರನ್ನು ಸೇರಲಿಕ್ಕಾಗಿ ಹೊರಟಿದ್ದಾನೆ. ಮಾರ್ಗಮಧ್ಯದಲ್ಲಿ ಪರಾಕ್ರಮಿಯಾದ ಶಲ್ಯನ ಸಹಾಯವನ್ನು ಹಾಗೂ ಅವನ ಸೈನ್ಯಬಲವನ್ನು ತನ್ನದಾಗಿಸಿಕೊಳ್ಳಬೇಕೆಂಬ ದುರ್ಬುದ್ಧಿಯಿಂದ ಕಪಟಿಯಾದ ದುರ್ಯೋಧನನು ತಾನು ಮರೆಯಲ್ಲಿ ಇದ್ದುಕೊಂಡು ವಿಶ್ರಾಂತಿಸಭಾವನ್ನು ನಿರ್ಮಿಸಿ ಶಲ್ಯನಿಗೆ ಬೇಕಾದ ಎಲ್ಲಾ ಭೋಗವ್ಯವಸ್ಥೆಗಳನ್ನು ಮಾಡಿಕೊಡುತ್ತಾನೆ. ಇವೆಲ್ಲವನ್ನೂ ಧರ್ಮರಾಜನೇ ಮಾಡಿರಬೇಕೆಂದು ಅಂದುಕೊಂಡ ಶಲ್ಯನು ಈ ವ್ಯವಸ್ಥೆಯನ್ನು ಮಾಡಿದವರ ಇಚ್ಛೆಯನ್ನು ನೆರವೇರಿಸುತ್ತೇನೆ ಎಂಬುದಾಗಿ ಘೋಷಣೆಯನ್ನು ಮಾಡುತ್ತಾನೆ. ತಕ್ಷಣ ಮುಂದೆ ಬಂದ ದುರ್ಯೋಧನನು ತಾನೇ ಇವೆಲ್ಲವನ್ನೂ ಒದಗಿಸಿಕೊಟ್ಟಿದ್ದು ಎಂದು ಹೇಳಿ ತನಗೇ ಯುದ್ಧದಲ್ಲಿ ಸಹಾಯವನ್ನು ಮಾಡಬೇಕೆಂದು ಆಗ್ರಹಿಸುತ್ತಾನೆ.

**ರಕ್ಷಾರ್ಥಮಾತ್ಮವಾಕ್ಯಸ್ಯ ತಥೇತ್ಯೇವಾಭ್ಯಭಾಷತ ।** – ಮ.ತಾ.ನಿ – 24–32

ತನ್ನ ಮಾತನ್ನು ಉಳಿಸಿಕೊಳ್ಳಲಿಕ್ಕಾಗಿ ಹಾಗೆಯೇ ಆಗಲಿ ಎಂದು ಹೇಳಿ ಶಲ್ಯನು ಅನಿವಾರ್ಯವಾಗಿ ದುರ್ಯೋಧನನ ಪಕ್ಷಕ್ಕೆ ಸೇರಿಕೊಳ್ಳಬೇಕಾಗುತ್ತದೆ. ಶಲ್ಯನು ಈ ವಿಷಯದಲ್ಲಿ ಪಾಂಡವರನ್ನು ಭೇಟಿಮಾಡಿ ಅವರ ಒಪ್ಪಿಗೆ ಪಡೆದುಕೊಳ್ಳುತ್ತಾನೆ. ಅರ್ಜುನನ ಶ್ರೇಯಸ್ಸಿಗಾಗಿ ಯುದ್ಧದಲ್ಲಿ ಕರ್ಣನ ತೇಜೋವಧೆಯನ್ನು ಮಾಡು ಎಂದು ಶಲ್ಯನನ್ನು ಧರ್ಮರಾಜನು ಕೇಳಿಕೊಂಡಾಗ ಅದಕ್ಕೆ ತನ್ನ ಸಮ್ಮತಿಯನ್ನು ಸೂಚಿಸುತ್ತಾನೆ ಶಲ್ಯ.

## ಶಲ್ಯನ ಪರಾಕ್ರಮ–

ಇಷ್ಟೆಲ್ಲಾ ಆದರೂ ಮದ್ರರಾಜ ಶಲ್ಯನು ತಾನು ಕೊಟ್ಟ ಮಾತಿಗೆ ಅನುಸಾರವಾಗಿ ಯುದ್ಧದಲ್ಲಿ ದುರ್ಯೋಧನನ ಪಕ್ಷದಲ್ಲಿ ಪ್ರಾಮಾಣಿಕವಾಗಿ ಹೋರಾಡುತ್ತಾನೆ. ಕರ್ಣನಿಗೆ ಸಾರಥಿಯಾಗಿ ಕಾರ್ಯನಿರ್ವಹಿಸಲೂ ಹಿಂಜರಿಯಲಿಲ್ಲ. ಹದಿನೇಳನೆಯ ದಿನ ಕರ್ಣನು ಸತ್ತು ಧರಾಶಾಯಿಯಾದಾಗ ಅಶ್ವತ್ಥಾಮನ ಸಲಹೆಯಂತೆ ದುರ್ಯೋಧನನು ಶಲ್ಯನನ್ನು ಸೇನಾಧಿಪತಿಯಾಗಲು ಕೇಳಿಕೊಂಡಾಗ ಆ ಜವಾಬ್ದಾರಿಯನ್ನು ವಹಿಸಿಕೊಂಡು ಬಹಳ ದಕ್ಷತೆಯಿಂದ ಯುದ್ಧವನ್ನು ಮುಂದುವರಿಸುತ್ತಾನೆ.

ಮಹಾಪರಾಕ್ರಮಿಯಾದ ಶಲ್ಯನು ವೀರಾವೇಶದಿಂದ ಕಾದಾಡಿ ಸಾತ್ಯಕಿ ದೃಷ್ಟದ್ಯುಮ್ನಮೊದಲಾದ ಮಹಾರಥರ ಆಯುಧಗಳನ್ನು ತುಂಡರಿಸುತ್ತಾನೆ. ಅರ್ಜುನ ಭೀಮಮೊದಲಾದವರನ್ನೂ ಧೈರ್ಯದಿಂದ ಎದುರಿಸುತ್ತಾನೆ.

ಒಂದು ಸಂದರ್ಭದಲ್ಲಿ ಶಲ್ಯನು ರಣರಂಗದಲ್ಲಿ ಮೆರೆಯುತ್ತಿದ್ದಾಗ ಅರ್ಜುನನು ಶಲ್ಯನನ್ನು ಎದುರಿಸುತ್ತಾನೆ. ಶಲ್ಯನು ವಜ್ರಾಯುಧದಂತಹ ಬಾಣವನ್ನು ಎತ್ತಿಕೊಂಡು ಅರ್ಜುನನ ಎದೆಗೆ ಹೊಡೆದು ಅವನನ್ನು ಮೂರ್ಛೆಗೊಳಿಸಿದನು. ಸಾವರಿಸಿಕೊಂಡ ಅರ್ಜುನನು ಶಲ್ಯನ ಎಲ್ಲಾ ಶಸ್ತ್ರಗಳನ್ನೂ ಪುಡಿಮಾಡುತ್ತಾನೆ. ಮತ್ತೊಮ್ಮೆ ಗದೆಯಿಂದ ಅರ್ಜುನನಿಗೆ ಹೊಡೆದು ಮೂರ್ಛೆಗೊಳಿಸುತ್ತಾನೆ. ಹೀಗೆ ಪರಾಕ್ರಮಿ ಅರ್ಜುನನ್ನೂ ಮಣಿಸಿದವನು ಶಲ್ಯ. ಧರ್ಮರಾಜನ ರಥವನ್ನೂ ಪುಡಿಮಾಡಿ ಕೌರವರ ಗೌರವಕ್ಕೆ ಪಾತ್ರನಾಗುತ್ತಾನೆ. ಇಂತಹ ಮಹಾಪರಾಕ್ರಮಿಯಾದ ಶಲ್ಯನನ್ನು ಮಣಿಸಲು ಭೀಮಸೇನನೇ ಬರಬೇಕಾಯಿತು. ಭೀಮಸೇನನು ಶಲ್ಯನ ಆಯುಧಗಳನ್ನು ಪುಡಿಮಾಡಿ ರಥವನ್ನೂ ನಾಶಮಾಡಿದನು. ಶಲ್ಯನಿಗೆ ಚೆನ್ನಾಗಿ ಪ್ರಹಾರಮಾಡಿದನು. ಅವನ ಮರ್ಮಸ್ಥಾನಗಳನ್ನು ಭೇದಿಸಿದ. ಹೀಗಿದ್ದಾಗ ಶಲ್ಯನು ಧರ್ಮರಾಜನ ಬಳಿಗೆ ಯುದ್ಧಕ್ಕೆ ಹೋದನು. ನಾನೂ ಒಬ್ಬ ಮಹಾವೀರನನ್ನು ಕೊಲ್ಲುವೆನು ಎಂಬ ಧರ್ಮರಾಜನ ಪ್ರತಿಜ್ಞೆಯನ್ನು ನೆರವೇರಿಸಲಿಕ್ಕಾಗಿ ಭೀಮನು ಶಲ್ಯನನ್ನು ಕೊಲ್ಲದೇ ಬಿಟ್ಟು ಬಿಡುತ್ತಾನೆ.

ಎದುರಿಗೆ ಬಂದ ಶಲ್ಯನ ಮೇಲೆ ಧರ್ಮರಾಜನು ತನ್ನ ಸತ್ಯಧರ್ಮ ಆಚರಣೆಗಳಿಂದ ಬಂದ ಪುಣ್ಯಪ್ರಭಾವವನ್ನೂ ಸೇರಿಸಿ ಅಮೋಘವಾದ ಶಕ್ತ್ಯಾಯುಧವನ್ನು ಪ್ರಯೋಗಿಸಿ ಶಲ್ಯನನ್ನು ಬೀಳಿಸುತ್ತಾನೆ. ಎದೆಯೊಡೆದು ಕೆಳಬಿದ್ದ ಶಲ್ಯನು ವೀರಸ್ವರ್ಗವನ್ನು ಹೊಂದುವನು.

ಹೀಗೆ ಕೇವಲ ಅರ್ಧದಿನದ ಕಾಲ ಸೇನಾಧಿಪತಿಯಾಗಿದ್ದರೂ ದುರ್ಯೋಧನನ ಆಪದ್ಬಾಂಧವನಾಗಿ ತನ್ನ ಸೋದರಳಿಯರ ಮೇಲೆಯೇ ಯುದ್ಧಮಾಡಿ ಮಹಾಭಾರತದಲ್ಲಿ ಅಚ್ಚಳಿಯದ ಸ್ಥಾನವನ್ನು ಪಡೆಯುತ್ತಾನೆ ಮದ್ರದೇಶದ ಚಕ್ರವರ್ತಿ ಶಲ್ಯ.

## ಹ್ರದಪ್ರವೇಶಪರ್ವ–

ಶಲ್ಯನ ವಧೆಯ ಸಂದರ್ಭದಲ್ಲಿ ಬಹುಶಃ ಕೌರವರ ಎಲ್ಲಾ ಸೈನಿಕರೂ ಯೋಧರೂ ಹತರಾಗಿದ್ದರು. ಇಷ್ಟಾದರೂ ಸೋಲೊಪ್ಪಲು ತಯಾರಿಲ್ಲದ ದುರ್ಯೋಧನನು ಮತ್ತೆ ತನ್ನವರನ್ನು ಬದುಕಿಸಿ ಯುದ್ಧದಲ್ಲಿ ಜಯವನ್ನು ಪಡೆಯುವ ಅಪೇಕ್ಷೆಯನ್ನು ಹೊಂದಿದ್ದ. ಅದಕ್ಕಾಗಿ ಅವನು ರಣರಂಗದಿಂದ ಕಾಲ್ನಡಿಗೆಯಲ್ಲಿಯೇ ಹೊರಟುಬಿಡುತ್ತಾನೆ. ಕೈಯಲ್ಲಿ ತನ್ನ ಭಾರವಾದ ಗದೆಯನ್ನು ಹಿಡಿದುಕೊಂಡು ದ್ವೈಪಾಯನಸರೋವರವನ್ನು ಪ್ರವೇಶಿಸುತ್ತಾನೆ. ಅಲ್ಲಿ ದೂರ್ವಾಸರು ಉಪದೇಶಿಸಿದ ಮೃತಸಂಜೀವಿನಿಮಂತ್ರವನ್ನು ಜಪಿಸಲು ಪ್ರಾರಂಭಿಸುತ್ತಾನೆ. ನೀರಿನಲ್ಲಿ ಇದ್ದುಕೊಂಡು ಏಳು ದಿನ ಈ ಮಂತ್ರವನ್ನು ಜಪಿಸಿದರೆ ಮೃತರಾದ ಎಲ್ಲಾ ಕೌರವಯೋಧರನ್ನು ಮತ್ತೆ ಬದುಕಿಸುವ ಸಾಮರ್ಥ್ಯ ಆ ಮಂತ್ರಕ್ಕಿತ್ತು.

## ಗದಾ(ಯುದ್ಧ)ಪರ್ವ–

ದುರ್ಯೋಧನನ ಮಂತ್ರವಿದ್ಯೆಯನ್ನು ತಿಳಿದಿದ್ದ ಪಾಂಡವರು ಕೌರವರನ್ನು ನಿಃಶೇಷವಾಗಿ ಕೊನೆಗೊಳಿಸಲಿಕ್ಕಾಗಿ ದುರ್ಯೋಧನನ್ನು ಹುಡುಕುತ್ತಾ ಹೊರಡುತ್ತಾರೆ. ಮಾರ್ಗಮಧ್ಯದಲ್ಲಿ ಹಿಂದೆ ಭೀಮನಿಗೆ ಮಾಂಸವನ್ನು ತಂದುಕೊಡುತ್ತಿದ್ದ ಬೇಡರು ದುರ್ಯೋಧನನು ದ್ವೈಪಾಯಸರೋವರವನ್ನು ಪ್ರವೇಶಿಸಿದ ವಿಷಯವನ್ನು ತಿಳಿಸುತ್ತಾರೆ.

ಸರೋವರದ ಬಳಿಗೆ ಬಂದ ಧರ್ಮರಾಜನು ಶ್ರೀಕೃಷ್ಣನ ಆದೇಶದಂತೆ ಕಟುವಾದ ಮಾತುಗಳಿಂದ ದುರ್ಯೋಧನನ್ನು ನಿಂದಿಸುತ್ತಾನೆ. ಸಹನೆಕಳೆದುಕೊಂಡ ದುರ್ಯೋಧನನು ಎಲ್ಲವನ್ನೂ ಕಳೆದುಕೊಂಡು ವಿಧವೆಯಂತಾದ ಸಾಮ್ರಾಜ್ಯವನ್ನು ನೀನೇ ಭೋಗಿಸು ಎಂದು ಧರ್ಮರಾಜನಿಗೆ ಹೇಳುತ್ತಾನೆ. ಆದರೆ ಅವನ ಇಂಗಿತ ಬೇರೆಯದ್ದೇ ಇತ್ತು. ಪಾಂಡವರು ಇಲ್ಲಿಂದ ದೂರ ಹೊರಟುಹೋದರೆ ತಾನು ಮಂತ್ರಸಿದ್ಧಿಯನ್ನು ಪಡೆಯುವುದು ಅವನ ಉದ್ದೇಶವಾಗಿತ್ತು. ಕೊನೆಗೆ ನೀರಿನಿಂದ ಮೇಲೆದ್ದ ದುರ್ಯೋಧನನು ಪಾಂಡವರೊಡನೆ ಯುದ್ಧಕ್ಕೆ ಸನ್ನದ್ಧನಾಗುತ್ತಾನೆ. ಈ

ಸಂದರ್ಭದಲ್ಲಿ ಧರ್ಮರಾಜನು ನಮ್ಮಲ್ಲಿ ಯಾರಾದರೊಬ್ಬರೊಡನೆ ಯುದ್ಧಮಾಡಿ ಸೋಲಿಸಿದರೂ ರಾಜ್ಯವನ್ನು ಮತ್ತೆ ಪಡೆಯುವಿ, ನಾವು ಮತ್ತೆ ಕಾಡಿಗೆ ಹೋಗುತ್ತೇವೆ ಎನ್ನುತ್ತಾನೆ. ಆಗ ದುರ್ಯೋಧನನು ದುರ್ಬಲರಾದ ಯುಧಿಷ್ಠಾದಿ ನಾಲ್ವರಜೊತೆಗೆ ಯುದ್ಧಮಾಡುವುದಿಲ್ಲ, ಭೀಮನೊಡನೆ ಗದೆಯಿಂದಲೇ ಯುದ್ಧಮಾಡುತ್ತೇನೆ ಎಂದು ಹೇಳುತ್ತಾನೆ. ಭೀಮದುರ್ಯೋಧನರು ಗದಾಯುದ್ಧಕ್ಕೆ ಸನ್ನದ್ಧರಾದಾಗ ಶ್ರೀಕೃಷ್ಣನು ಧರ್ಮರಾಜನಿಗೆ ನೀನು ಅಪಾಯಕಾರಿಯಾದ ನಿರ್ಧಾರವನ್ನು ತೆಗೆದುಕೊಂಡಿರುವಿ. ದುರ್ಯೋಧನನು ಅರ್ಜುನಾದಿ ನಾಲ್ವರನ್ನೂ ಕೊಲ್ಲಬಲ್ಲವನಾಗಿದ್ದ. ಬಲದಲ್ಲಿ ಭೀಮನಿಗೆ ಸಮಾನನು ಇನ್ನೊಬ್ಬನಿಲ್ಲದಿದ್ದರೂ ದುರ್ಯೋಧನನೂ ತುಂಬ ಬಲಿಷ್ಠನಾಗಿದ್ದಾನೆ ಹಾಗೂ ಸದಾ ಪ್ರಯತ್ನಶೀಲನಾಗಿದ್ದಾನೆ. ಬಲಕ್ಕಿಂತಲೂ ಪ್ರಯತ್ನವೇ ಶ್ರೇಷ್ಠವಾದುದು. ಆದ್ದರಿಂದ ಭೀಮನು ಆಪದ್ಧರ್ಮವನ್ನು ಅನುಸರಿಸಿ ಏನಾದರೂ ಉಪಾಯವನ್ನು ಮಾಡಿ ದುರ್ಯೋಧನನನ್ನು ಸಾಯಿಸಬೇಕು. ಎಂದು ಹೇಳುತ್ತಾನೆ.

**ಬಲೀ ಭೀಮಃ ಸಮರ್ಥಶ್ಚ ಕೃತೀ ರಾಜಾ ಸುಯೋಧನಃ ।**
**ಬಲವಾಂಶ್ಚ ಕೃತೀ ಚೇತಿ ಕೃತೀ ರಾಜನ್ ವಿಶಿಷ್ಯತೇ ॥** – ಮ.ಭಾ. ಶಲ್ಯಪರ್ವ

ಗದಾಯುದ್ಧದಲ್ಲಿ ದುರ್ಯೋಧನನೇ ನಿಪುಣನಾಗಿದ್ದಾನೆ ಎಂಬುದು ಮೇಲ್ನೋಟಕ್ಕೆ ತಿಳಿದುಬರುತ್ತದೆ. ಆದರೆ ದುಯೋಧನನನ್ನು ಹೊಗಳುವುದು ಶ್ರೀಕೃಷ್ಣನ ಅಭಿಪ್ರಾಯವಾಗಿರಲಿಲ್ಲ. ಪ್ರಯತ್ನವಿಲ್ಲದೇ ಕಾರ್ಯಸಾಧನೆಮಾಡುವುದು ಬಲಶಾಲಿಗಳಿಗೆ ದೊಡ್ಡಗುಣವೇ ಆಗಿರುತ್ತದೆ. ಪ್ರಯತ್ನಪೂರ್ವಕ ಕಾರ್ಯಸಾಧನೆ ದುರ್ಬಲರ ಲಕ್ಷಣ. ಭೀಮನು ನಿರಾಯಸವಾಗಿ ದುರ್ಯೋಧನನ್ನು ಸಾಯಿಸಬಲ್ಲ ಎಂಬುದು ಶ್ರೀಕೃಷ್ಣನ ಅಭಿಪ್ರಾಯ.

ಇನ್ನು ಆಪದ್ಧರ್ಮವನ್ನು ಅನುಸರಿಸು ಎಂದು ಹೇಳಿದ್ದೂ ಗೂಢಾಭಿಸಂಧಿ ಯಿಂದ. ದುರ್ಯೋಧನನ ತೊಡೆಯನ್ನು ಮುರಿಯುವುದು ಭೀಮನ ಪ್ರತಿಜ್ಞೆಯಾಗಿತ್ತು. ಆದರೆ ಗದಾಯುದ್ಧದಲ್ಲಿ ನಾಭಿಗಿಂತ ಕೆಳಗೆ ಹೊಡೆಯುವುದು ಲೋಕನಿಂದಿತವಾದುದು. ಪ್ರತಿಜ್ಞಾಪಾಲನೆ ಕ್ಷತ್ರಿಯನಿಗೆ ಮುಖ್ಯಧರ್ಮ. ಗದಾಯುದ್ಧದ ನಿಯಮವನ್ನು ಪಾಲಿಸುವುದು ಆದಕ್ಕಿಂತ ಅಮುಖ್ಯಧರ್ಮ. ಹುಲಿಯಿಂದ ಗೋವನ್ನು ರಕ್ಷಿಸಲಿಕ್ಕಾಗಿ ಹುಲಿಯನ್ನು ಸಾಯಿಸುವುದು ಆಪದ್ಧರ್ಮವಾಗುತ್ತದೆ. ಭೀಮನಿಗೆ ಜನಾಪವಾದ ಬರಬಾರದು ಎಂಬ ಕಾರಣದಿಂದ ಶ್ರೀಕೃಷ್ಣನು ಯಾವುದಾದರೂ ಉಪಾಯದಿಂದ ದುರ್ಯೋಧನನ ತೊಡೆಯನ್ನು

ಮುರಿಯಲು ಹೇಳುತ್ತಿದ್ದಾನೆ. ಮುಂದೆ ಭೀಮನೂ ಗದಾಯುದ್ಧದ ನಿಯಮಕ್ಕೆ ಭಂಗಬರದ ರೀತಿಯಲ್ಲಿಯೇ ದುರ್ಯೋಧನನ ಎರಡೂ ತೊಡೆಗಳನ್ನೂ ಮುರಿಯುತ್ತಾನೆ.

**ತೀರ್ಥಯಾತ್ರಾಪರ್ವ-**

ಇತ್ತ ಕುರುಪಾಂಡವರ ಯುದ್ಧದಲ್ಲಿ ಭಾಗವಹಿಸದೆ ಬಲರಾಮನು ತೀರ್ಥಯಾತ್ರೆಗೆಹೋಗಿದ್ದ, ಸರಸ್ವತೀತೀರದಲ್ಲಿ ನಾರದರ ಮಾತಿನಿಂದ ತನ್ನ ಶಿಷ್ಯರಾದ ಭೀಮ-ದುರ್ಯೋಧನರ ಗದಾಯುದ್ಧದ ವಿಷಯವನ್ನುತಿಳಿದು ಬಲರಾಮನೂ ದ್ವೈಪಾಯನಸರೋವರದ ಸನಿಹಕ್ಕೆ ಬರುತ್ತಾನೆ.

ಈ ಸಂದರ್ಭದಲ್ಲಿ ಜನಮೇಜಯರಾಜನು ಬಲರಾಮನ ತೀರ್ಥಯಾತ್ರೆಯ ಬಗ್ಗೆ ಕೇಳಿದಾಗ ವೈಶಂಪಾಯನರು ಬಲರಾಮನ ವಿವಿಧತೀರ್ಥಯಾತ್ರೆಯನ್ನು ವಿವರಿಸುತ್ತಾರೆ. ಪ್ರಭಾಸಕ್ಷೇತ್ರದ ಮಹಿಮೆ, ಚಂದ್ರನಗೆ ದಕ್ಷನಶಾಪಪ್ರಾಪ್ತಿ ಮತ್ತು ಅದರ ವಿಮೋಚನೆಯನ್ನು ವಿವರಿಸಿ ಆಮೂಲಕ ಕ್ಷೇತ್ರದ ಮಹಿಮೆಯನ್ನು ವರ್ಣಿಸುತ್ತಾರೆ. ಉದಪಾನತೀರ್ಥ, ಸಪ್ತಸಾರಸ್ವತತೀರ್ಥ, ಔಷನಸತೀರ್ಥ, ಕಪಾಲಮೋಚನತೀರ್ಥ ಮೊದಲಾದ ತೀರ್ಥಗಳ ವೈಶಿಷ್ಟ್ಯವು ಹೇಳಲ್ಪಡುತ್ತದೆ. ಸರಸ್ವತಿಯ ಶಾಪವಿಮೋಚನೆ, ವಿಶ್ವಾಮಿತ್ರವಸಿಷ್ಠರ ಕಥಾಪ್ರಸಂಗ, ಸ್ಕಂದನ ಉತ್ಪತ್ತಿ, ದೇವಸೇನಾಧಿಪತಿಯಾಗಿ ಸ್ಕಂದನ ಪಟ್ಟಾಭಿಷೇಕ, ವರುಣನ ಪಟ್ಟಾಭಿಷೇಕ, ವೃದ್ಧಕನ್ಯಾಚರಿತ್ರೆ ಮೊದಲಾದವುಗಳನ್ನೂ ಜನಮೇಜಯರಾಜನಗೆ ತಿಳಿಸುತ್ತಾರೆ.

ನಾರದರ ಮಾತಿನಂದ ಕುರುಕ್ಷೇತ್ರಕ್ಕೆ ಬಂದ ಬಲರಾಮನು ಭೀಮದುರ್ಯೋಧನರ ಯುದ್ಧವನ್ನುತಡೆಯುವಂತೆ ಶ್ರೀಕೃಷ್ಣನಿಗೆ ಹೇಳುತ್ತಾನೆ. ಆದರೆ ಬಲರಾಮನು ತಡೆದರೂ ಭೀಮದುರ್ಯೋಧನರು ಯುದ್ಧವನ್ನು ನಿಲ್ಲಿಸುವುದಿಲ್ಲ. ಶ್ರೀಕೃಷ್ಣನೂ ಕೋಪಗೊಂಡ ಬಲರಾಮನಿಗೆ ಪರಿಸ್ಥಿತಿಯನ್ನು ವಿವರಿಸುತ್ತಾನೆ.

ಗದಾಯುದ್ಧಕುಶಲರಾದ ಭೀಮದುರ್ಯೋಧನರು ಮಂಡಲಾಕಾರವಾಗಿ ಕಾದಾಡುತ್ತಿದ್ದರು. ದುರ್ಯೋಧನನನ್ನು ಹೊಡೆದುರುಳಿಸುವ ಮುಹೂರ್ತಕ್ಕಾಗಿ ಭೀಮಸೇನನು ಶ್ರೀಕೃಷ್ಣನ ಅನುಜ್ಞೆಗಾಗಿ ಕಾಯುತ್ತಿದ್ದ. ಶ್ರೀಕೃಷ್ಣನ ಒಪ್ಪಿಗೆಯನ್ನು ಅರ್ಜುನನು ತೊಡೆತಟ್ಟುವ ಮೂಲಕ ತೋರಿಸುತ್ತಾನೆ. ಆಗ ದುರ್ಯೋಧನನು ಭೀಮನನ್ನು ವಂಚಿಸುವ ದೃಷ್ಟಿಯಿಂದ ತನ್ನ ತಲೆಯನ್ನು ಕೆಳಗೆಮಾಡಿ ಸೊಂಟವನ್ನು ಮೇಲೆ ಮಾಡಿ ಪ್ರಾಣಿಯಂತೆ ನಿಂತುಕೊಂಡು ಭೀಮನಮೇಲೆ ಆಕ್ರಮಣವನ್ನು

ಮಾಡಲು ಕಾಯುತ್ತಿದ್ದ. ತಕ್ಷಣ ಭೀಮನು ದುರ್ಯೋಧನನ ನಾಭಿಗೆ ಸಮಾನಾಂತರದಲ್ಲಿ ಬೆನ್ನಿನ ಬುಡಕ್ಕೆ ಗದೆಯಿಂದ ಹೊಡೆಯುತ್ತಾನೆ. ಆ ಹೊಡೆತದಿಂದಾಗಿ ದುರ್ಯೋಧನನ ಎರಡೂ ತೊಡೆಗಳೂಮುರಿದುಬಿದ್ದವು. ಹೀಗೆ ಗದಾಯುದ್ಧದಲ್ಲಿ ಭೀಮನು ನಾಭಿಯ ಕೆಳಗೂ ಹೊಡೆಯಲಿಲ್ಲ, ನಾಭಿಯ ಮೇಲ್ಭಾಗಕ್ಕೂ ಹೊಡೆಯಲಿಲ್ಲ, ಬದಲಾಗಿ ನಾಭಿಗೆ ಸಮಾನಾಂತರದಲ್ಲಿ ಹೊಡೆದು ಶತ್ರುವಿನ ತೊಡೆಯನ್ನು ಮುರಿಯುತ್ತಾನೆ. ಹೀಗೆ ಭೀಮನಗೆ ಬರಬಹುದಾಗಿದ್ದ ಅಪಕೀರ್ತಿಯೂ ಇಲ್ಲವಾಯಿತು. ಅವನ ಪ್ರತಿಜ್ಞೆಯೂ ನೆರವೇರಿತು. ಕಲಿಯ ಅವತಾರವಾದ ದುರ್ಯೋಧನನು ನೆಲಕ್ಕೆ ಬಿದ್ದಾಗ ರಕ್ತ ಮತ್ತು ದೂಳಿನ ಮಳೆಯು ಸುರಿಯಿತು. ಅನೇಕ ಅಪಶಕುನಗಳು ಕಾಣಿಸಿಕೊಂಡವು.

ಜೂಜಿನಲ್ಲಿ ಶ್ರೀಕೃಷ್ಣನನ್ನೇ ಪಣವನ್ನಾಗಿ ಇಡು ಎಂದು ದುರ್ಯೋಧನನು ಹೇಳಿದ್ದಕ್ಕೆ ಪ್ರತಿಯಾಗಿ ಭೀಮನು ಕೆಳಬಿದ್ದ ದುರ್ಯೋಧನನ ತಲೆಯನ್ನು ಕಾಲಿನಿಂದ ಮತ್ತೆ ತುಳಿಯುತ್ತಾನೆ.

**ಋಷಭಂ ಮಾ ಸಮಾನಾನಾಮಿತಿ ಸೂಕ್ತಂ ದದರ್ಶ ಹ ।**
**ತೇಷಾಂ ಪುಣ್ಯಾನಿ ವಿದ್ಯಾಶ್ಚ ಸಮಾದಾಯೈವ ಸರ್ವಶಃ ॥**
**ತಾಂಶ್ಚಕಾರ ತಮೋಗಂತ್ಯಾಂಸ್ತಸ್ಯ ಮೂರ್ಧ್ನಿ ಪದಾऽಕ್ರಮನ್ ॥**

– ಮ. ತಾ. ನಿ. 28/10

ದುಷ್ಟರಾದ ಧಾರ್ತರಾಷ್ಟ್ರರ ಪುಣ್ಯ ಮತ್ತು ಜ್ಞಾನಗಳನ್ನು ಕಸಿದು ಅವರನ್ನು ತಮಸ್ಸಿಗೆ ಕಳುಹಿಸಲಿಕ್ಕಾಗಿ ಭೀಮನು ದುರ್ಯೋಧನನ ತಲೆಯನ್ನು ತುಳಿದನು. ಋಷಭಸೂಕ್ತದ ಮಂತ್ರಗಳಿಂದ ಭಗವಂತನನ್ನು ಸ್ತುತಿಸುತ್ತಾ ಈ ಕಾರ್ಯವನ್ನು ಮಾಡುತ್ತಾನೆ ಭೀಮಸೇನ. ದುರ್ಯೋಧನನು ಮಾಡಿದ ಕೆಟ್ಟ ಕೆಲಸಗಳನ್ನೆಲ್ಲಾ ನೆನಪಿಸುತ್ತಾನೆ. ಇದೇ ತಲೆಯಿಂದ ಶ್ರೀಕೃಷ್ಣನನ್ನು ಬಂಧಿಸುವ ಆಲೋಚನೆಯನ್ನು ಮಾಡಿದ್ದಿ ಎಂದು ಹೇಳುತ್ತಾ ಮತ್ತೊಮ್ಮೆ ತಲೆಗೆ ಒದೆಯುತ್ತಾನೆ.

## ಭೀಮನು ಅಧರ್ಮವನ್ನು ಮಾಡಿದನೇ?

ಈ ಆಕ್ಷೇಪವನ್ನು ಮಾಡುತ್ತಾ ಬಲರಾಮನು ತನ್ನ ಹಲಾಯುಧವನ್ನು ಎತ್ತಿಕೊಂಡು ಭೀಮನ ಮೇಲೆ ಆಕ್ರಮಣಮಾಡಲು ಬಂದಾಗಲೂ ಭೀಮನು ಅಚಲನಾಗಿ ನಿಂತುಕೊಂಡನು. ಆಗ ಶ್ರೀಕೃಷ್ಣನೇ ಬಲರಾಮನನ್ನು ತಡೆಯುತ್ತಾನೆ ಮತ್ತು ಭೀಮನು ಧರ್ಮವನ್ನೇ ಮಾಡಿದ್ದಾನೆ ಎಂದು ಯುಕ್ತಿಯುಕ್ತವಾಗಿ ಸಮರ್ಥಿಸುತ್ತಾನೆ.

**ನ ಮಂಡಲೇಽಭಿಸಾರೇ ವಾ ನಾಪಸಾರೇ ಚ ನಾಭಿತಃ ।**
**ಅಧೋ ಹನ್ಯಾದ್ ವಂಚಯಂತಮಧೋ ಹತ್ವಾ ನ ದುಷ್ಯತಿ ॥**

ಗದಾಯುದ್ಧದಲ್ಲಿ ವಿಧಿಬದ್ಧವಾದ ಮಂಡಲರಚನೆಯಲ್ಲಾಗಲೀ, ಮುಂದುಗಡೆಯಿಂದ ಯುದ್ಧಮಾಡವಾಗಲೀ ಅಥವಾ ದೂರಕ್ಕೆ ಹೋಗುತ್ತಿರು-ವಾಗಲೀ ಭೀಮನು ನಾಭಿಯಿಂದ ಕೆಳಗೆ ಹೊಡೆಯಬಾರದು. ಆದರೆ ವಂಚನೆಯನ್ನು ಮಾಡುವಾಗ ನಿಯಮವನ್ನು ಮೀರಿದರೂ ದೋಷವಾಗುವುದಿಲ್ಲ. ಪರಸ್ತ್ರೀಗೆ ತೊಡೆಯನ್ನು ತೋರಿಸಿದವನ ತೊಡೆಯನ್ನು ಮುರಿಯುವುದು ಧರ್ಮವೇ ಆಗಿದೆ. ಆ ಪ್ರತಿಜ್ಞೆಯನ್ನು ನೆರವೇರಿಸಿದ್ದಾನೆ ಭೀಮನೇನ. ಆದ್ದರಿಂದ ಭೀಮನು ಯಾವ ಅಧರ್ಮವನ್ನೂಮಾಡಲಿಲ್ಲ ಎಂದು ಶ್ರೀಕೃಷ್ಣನು ಸಮರ್ಥಿಸುತ್ತಾನೆ.

## ದುರ್ಯೋಧನನ ಮೇಲೆ ದೇವತೆಗಳು ಪುಷ್ಪವೃಷ್ಟಿಮಾಡಿದರು!

ಪಾಂಡವರಲ್ಲಿ ಯಾವ ಅಧರ್ಮವೂ ಇಲ್ಲ ಎಂಬುದಾಗಿ ಶ್ರೀಕೃಷ್ಣನು ಮತ್ತೆ ಮತ್ತೆ ಹೇಳಿದಾಗ ಅದನ್ನು ಸಹಿಸಿಕೊಳ್ಳಲಾಗದೆ ನೆಲದಲ್ಲಿ ಬಿದ್ದ ದುರ್ಯೋಧನನು ಅಲ್ಲಿಂದಲೇ ಶ್ರೀಕೃಷ್ಣನನ್ನು ನಿಂದಿಸುತ್ತಾನೆ. ನೀನೇ ಪಾಂಡವರ ಮೂಲಕ ಪಾಪವನ್ನು ಮಾಡಿಸಿದವನು ಎಂದು ಹೀಯಾಳಿಸುತ್ತಾನೆ.

ಆಗ ಶ್ರೀಕೃಷ್ಣನು ದುರ್ಯೋಧನನು ಮಾಡಿದ ಅಧರ್ಮಗಳ ಸರಮಾಲೆಯನ್ನೇ ನೆನಪಿಸುತ್ತಾನೆ. ಪಾಂಡವರು ಸ್ವಭಾವದಿಂದಲೂ ಧಾರ್ಮಿಕರು ಹಾಗೂ ಗುಣಶಾಲಿಗಳು. ನೀನು ಸ್ವಭಾವದಿಂದಲೇ ಪಾಪಿ. ಧಾರ್ಮಿಕರನ್ನೂ ಪಾಪ ಮಾರ್ಗದಲ್ಲಿ ತೊಡಗಿಸಿ ಅದರ ಫಲವಾಗಿ ಇಂತಹ ಅಧೋಗತಿಯನ್ನು ಹೊಂದಿರುವಿ ಎನ್ನುತ್ತಾನೆ.

ಆಗ ದುರ್ಯೋಧನನು ತನ್ನ ಅಂತ್ಯವನ್ನು ತಾನೇ ಕೊಂಡಾಡಿಕೊಳ್ಳುತ್ತಾನೆ. ನನ್ನಂತಹ ಮನಸ್ಸನ್ನಾಗಲೀ ನನಗೆ ಬಂದಂತಹ ಮರಣವನ್ನಾಗಲೀ ಬೇರೆ ಎಲ್ಲಿಯೂ ನೋಡಲು ಸಾಧ್ಯವಿಲ್ಲ. ಯಾಗಯಜ್ಞಗಳನ್ನು ಮಾಡಿದೆ. ರಣರಂಗದಲ್ಲಿಯೇ ಮರಣವನ್ನು ಹೊಂದಿ ಉತ್ತಮ ವೀರಸ್ವರ್ಗವನ್ನೂ ಹೊಂದುವೆನು. ಪಾಪಿಗಳಾದ ಪಾಂಡವರು ಎಲ್ಲಾ ಯೋಧರನ್ನು ಕಳೆದುಕೊಂಡಿರುವ ಈ ಭೂಮಿಯನ್ನು ಅನುಭವಿಸಲಿ ಎಂದು ಹೇಳುತ್ತಾನೆ.

ದೇವೇಂದ್ರನು ಇಂತಹವರಿಗಾಗಿಯೇ ತಾತ್ಕಾಲಿಕವಾಗಿ ವೀರಸ್ವರ್ಗವನ್ನು ನಿರ್ಮಿಸುತ್ತಾನೆ. ಇದು ಸ್ವರ್ಗಕ್ಕಿಂತ ಕೆಳಗೆ ಹಾಗೂ ಅಂತರಿಕ್ಷಕ್ಕಿಂತ ಮೇಲೆ ಇರುತ್ತದೆ ಎಂದು ಲಕ್ಷಾಲಂಕಾರದಲ್ಲಿ ಶ್ರೀವಾದಿರಾಜರು ಹೇಳುತ್ತಾರೆ.

ಆಗ ದೇವತೆಗಳು ದೇವಲೋಕದಿಂದ ಹೂವಿನ ಮಳೆ ಸುರಿಯುತ್ತಾರೆ. ಆದರೆ ಇದು ಸಂತೋಷದ ಪುಷ್ಪವೃಷ್ಟಿಯಲ್ಲ.

**ಇತ್ಯುಕ್ತವತ್ಯೇವ ನೃಪೇ ಸುರೇಶೈಃ ಪ್ರಸೂನವೃಷ್ಟಿರ್ವಿಹಿತಾ ಪಪಾತ ।**
**ತಾಮೇವ ಬುದ್ಧಿಂ ಧೃತರಾಷ್ಟ್ರಸೂನೋಃ ಕೃತ್ವಾ ದೃಢಾಂ ಪಾತಯಿತುಂ ತಮೋಽಂಧೇ ॥**

– ಮ.ತಾ.ನಿ.

ದುರ್ಯೋಧನನಗೆ ಈ ಪಾಪ ಬುದ್ಧಿಯು ದೃಢವಾಗಿ, ಅವನನ್ನು ಅಂಧಂತಮಸ್ಸಿನಲ್ಲಿ ಬೀಳಿಸುವುದಕ್ಕಾಗಿ ದೇವತೆಗಳು ಈ ರೀತಿಯಲ್ಲಿ ಮಾಡುತ್ತಾರೆ.

ಲಕ್ಷಾಲಂಕಾರದಲ್ಲಿ ಶ್ರೀವಾದಿರಾಜರು ಹೀಗೆ ಹೇಳುತ್ತಾರೆ – ದೇವತೆಗಳ ಪುಷ್ಪವೃಷ್ಟಿಯು ಪ್ರೀತಿಯಿಂದ ಆಗಿದ್ದಲ್ಲ, ಏಕೆಂದರೆ ದುರ್ಯೋಧನನು ತೊಡೆಮುರಿದು ಬಿದ್ದಾಗ ಇದೇ ದೇವತೆಗಳು ರಕ್ತದ ಹಾಗೂ ದೂಳಿನ ಮಳೆಯನ್ನು ಸುರಿಸಿದ್ದರು. ಇದೇ ದೇವತೆಗಳು ಹಿಂದೆ ಇಂತಹ ದುರ್ಯೋಧನ ಮೊದಲಾದ ದುಷ್ಟರ ತೊಂದರೆಯನ್ನು ಪರಿಹಾರಮಾಡಲಿಕ್ಕಾಗಿಯೇ ಶ್ವೇತದ್ವೀಪಕ್ಕೆ ಹೋಗಿ ಶ್ರೀಮನ್ನಾರಾಯಣನಲ್ಲಿ ಪ್ರಾರ್ಥಿಸಿದ್ದರು. ದುರ್ಯೋಧನನ ಮೇಲೆ ಅಂತಹ ಪ್ರಬಲವಾದ ದ್ವೇಷವಿರಿಸಿಕೊಂಡಿದ್ದ ದೇವತೆಗಳಿಗೆ ಅವನ ಮೇಲೆ ಪ್ರೀತಿಯುಂಟಾಗಲು ಖಂಡಿತಾ ಸಾಧ್ಯವಿಲ್ಲ. ಈ ಪುಷ್ಪವೃಷ್ಟಿಯು ಅವನ ದುಷ್ಟಬುದ್ಧಿಯ ಸ್ಥಿರತೆಗಾಗಿಯೇ ನಡೆದಿತ್ತು.

## ಮಹಾಭಾರತದ ಅಧ್ಯಯನದಲ್ಲಿ ಶ್ರೀಮದಾಚಾರ್ಯರ ತಾತ್ಪರ್ಯನಿರ್ಣಯ ಮತ್ತು ಶ್ರೀವಾದಿರಾಜರ ಲಕ್ಷಾಲಂಕಾರಗಳ ಪಾತ್ರ –

ವ್ಯಾಸರು ಕೊಟ್ಟ ಮೂಲಮಹಾಭಾರತವನ್ನು ಹಾಗೆಯೇ ಅರ್ಥೈಸಲು ಹೊರಟರೆ ಅರ್ಥಕ್ಕಿಂತ ಅನರ್ಥವಾಗುವ ಸಂಭವವೇ ಹೆಚ್ಚು. ಸತ್ಯಧರ್ಮನ್ಯಾಯಗಳನ್ನು ಪ್ರತಿನಿಧಿಸುವ ಪಾಂಡವರೇ ಎಷ್ಟೋ ಸಂದರ್ಭದಲ್ಲಿ ಎಡವಿದಂತೆ ಕಾಣಿಸುತ್ತದೆ. ಧರ್ಮಸಂಸ್ಥಾನಗೋಸ್ಕರನೇ ಅವತರಿಸಿದ ಶ್ರೀಕೃಷ್ಣನೇ ಅಧರ್ಮವನ್ನು ಬೋಧಿಸಿದಂತೆ ಭಾಸಬಾಗುತ್ತದೆ. ಇದಕ್ಕೆಲ್ಲಾ ಸಮರ್ಥ ಉತ್ತರವನ್ನು ಕೊಟ್ಟವರು ಶ್ರೀಮಧ್ವಾಚಾರ್ಯರು. ದುರ್ಯೋಧನನ ಊರುಭಂಗಸಂದರ್ಭದಲ್ಲಿ ಕೃಷ್ಣಭಕ್ತರಿಗೂ ಇರುಸುಮುರುಸು ಆಗುವ ಸಂದರ್ಭವು ಮೂಲಮಹಾಭಾರತವನ್ನು ಓದಿದಾಗ ಉಂಟಾಗುತ್ತದೆ. ಭೀಮನು ಗದಾಯುದ್ಧದ ನಿಯಮವನ್ನು ಮೀರಿ ದುರ್ಯೋಧಾನನ ತೊಡೆಗಳನ್ನು ಮುರಿದ ಎಂಬ ಅಪವಾದ ಭೀಮನಿಗೆ

ಅಂಟಿಕೊಳ್ಳುವ ಅವಕಾಶ ಸೃಷ್ಟಿಯಾಗುತ್ತದೆ. ಶ್ರೀಮಧ್ವಾಚಾರ್ಯರು ಪಾಂಡವರು ಯಾವಸಂದರ್ಭದಲ್ಲಿಯೂ ಧರ್ಮವನ್ನು ಮೀರಿ ನಡೆದಿಲ್ಲ ಎಂಬುದನ್ನು ಯುಕ್ತಿ-ಪ್ರಮಾಣಗಳಿಂದ ಸಮರ್ಥಿಸಿ ತೋರಿಸಿದ್ದಾರೆ. ದುಷ್ಟ ದುರ್ಯೋಧನನು ಶ್ರೀಕೃಷ್ಣನನ್ನು ಹಾಗೂ ಪಾಂಡವರನ್ನು ನಿಂದಿಸಿದಾಗ ಆಕಾಶದಿಂದ ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು ಎಂಬ ಮಹಾಭಾರತದ ಕಥಾನಕದ ಒಳಾರ್ಥವನ್ನು ಆಚಾರ್ಯರು ವಿಶದಪಡಿಸಿದ್ದಾರೆ.

ಶ್ರೀವಾದಿರಾಜರ ಲಕ್ಷಾಲಂಕಾರವು ಮಹಾಭಾರತದ ಪಾಠರಕ್ಷಣೆಯಲ್ಲಿ ಮಹತ್ತ್ವದ ಕಾರ್ಯವನ್ನು ವಹಿಸುತ್ತದೆ. ಅಪ್ರಸಿದ್ಧವಾದ ಪದಗಳು ಬಂದಾಗ ಅರ್ಥವಾಗದೆ ಪಾಠವನ್ನೇ ಬದಲಿಸುವ ಸಂದರ್ಭವು ಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಶ್ರೀವಾದಿರಾಜರು ಅಂತಹ ವಿಶಿಷ್ಟಪದಗಳಿಗೂ ವಿದ್ವಜ್ಜನಸಮ್ಮತವಾದ ಯುಕ್ತಿಯುಕ್ತವಾದ ಅರ್ಥವನ್ನು ತೋರಿಸಿಕೊಟ್ಟಿದ್ದಾರೆ.

ವಿಧ್ವಸ್ತಕವಚಾಃಸರ್ವೇ ಕಾಂದಿಶೀಕಾ ವಿಚೇತಸಃ। ಇದು ಶಲ್ಯಪರ್ವದ ಆರಂಭದಲ್ಲಿಯ ಒಂದು ಶ್ಲೋಕ. ಇಲ್ಲಿ ಕಾಂದಿಶೀಕಾಃ ಎಂಬ ಪದಕ್ಕೆ ರಣೇ ಶಸ್ತ್ರಾದಿನಾ ಕೃತವರ್ಣಾಃ ಎಂಬ ವ್ಯಾಖ್ಯಾನವನ್ನು ಶ್ರೀವಾದಿರಾಜರು ಮಾಡಿ ಕಾಂದಿಶೀಕೋ ರಣೇ ಕ್ಷತಃ ಇತ್ಯಮರಃ ಎಂಬ ಕೋಶವನ್ನೂ ಉಲ್ಲೇಖಮಾಡುತ್ತಾರೆ.

ಇನ್ನೊಂದೆಡೆ

**ಭವನಾದ್ ಭವನಂ ರಾಜನ್ ಪ್ರಯಾತುಃ ಪೃಥಿವೀಪತೇ ।**
**ದೇವಾಲಯಪ್ರವೇಶೇ ಚ ಪಂಥಾಃ ಯಸ್ಯ ಹಿರಣ್ಮಯಃ ॥** ಶಲ್ಯಪರ್ವ 29–54

**ಸ್ವಗೃಹಾಂತರ್ವರ್ತಿಭವನೇಷು ಭವನಾದ್ ಭವನಂ ಪ್ರಯಾತುಂ ಸ್ವಗೃಹಾಂತರ್ವರ್ತಿದೇವಮಂದಿರಪ್ರವೇಶಾಯ ಇತ್ಯರ್ಥಃ ।**

ತನ್ನ ಅರಮನೆಯ ಒಳಗೆ ದೇವಮಂದಿರಕ್ಕೆ ಹೋಗುವ ದಾರಿಯನ್ನು ಬಂಗಾರದಿಂದ ಅಲಂಕರಿಸಿದ್ದ ಎಂದು ಅರ್ಥ.

ಹೀಗೆ ಈ ಎರಡೂ ವ್ಯಾಖ್ಯಾನಗಳು ಮಹಾಭಾರತದ ಅರ್ಥಶುದ್ಧಿಗೆ ಮತ್ತು ಪಾಠಶುದ್ಧಿಗೆ ಅತ್ಯಂತ ಆವಶ್ಯಕವಾದವುಗಳು ಎಂಬುದನ್ನು ಗಮನಸಿಬೇಕು.

**ಕೃತಜ್ಞತೆ – ಸಮರ್ಪಣೆ**

ಉಡುಪಿ ಸರ್ವಜ್ಞಪೀಠಾಧಿಷ್ಠಿತರಾದ ಪಲಿಮಾರು ಮಠದ ಪರಮಪೂಜ್ಯ ಶ್ರೀ ಶ್ರೀ **ವಿದ್ಯಾಧೀಶತೀರ್ಥರ** ನೇತೃತ್ವದಲ್ಲಿ ನಡೆಯುತ್ತಿರುವ ಮಹಾಭಾರತ

ಕನ್ನಡೀಕರಣಯೋಜನೆಯು ವಿದ್ವಾಂಸರಿಗೂ ಹಾಗೂ ಸಾಮಾನ್ಯಜನರಿಗೂ ಬಹಳ ಉಪಕಾರಿಯಾಗಿದೆ. ಮುದ್ರಿತಪುಸ್ತಕಗಳನ್ನು ಕೊಂಡು ಓದುವ ಹವ್ಯಾಸವು ಕಮ್ಮಿಯಾಗಿರುವ ಈಗಿನ ಕಾಲಘಟ್ಟದಲ್ಲಿಯೂ ಇಂತಹ ಬೃಹತ್ ಯೋಜನೆಯನ್ನು ಕೈಗೆತ್ತಿಕೊಂಡಿರುವುದು ನಿಜವಾಗಿಯೂ ಹರಿಗುರುಗಳು ಮೆಚ್ಚುವ ಕಾರ್ಯವಾಗಿದ್ದು ಶ್ಲಾಘನೀಯವಾಗಿದೆ. ಮಹಾಭಾರತದ ಅನೇಕ ವ್ಯಾಖ್ಯಾನಗಳು ಉಪಲಬ್ಧವಾಗಿದ್ದರೂ ಶುದ್ಧಪಾಠದ ಹಾಗೂ ಪರಿಶುದ್ಧಾರ್ಥವುಳ್ಳ ಸರಳಾನುವಾದಸಹಿತವಾದ ಪ್ರಕಾಶನ ಇದಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಶ್ರೀಗಳ ಮನದ ಇಂಗಿತವನ್ನು ಚೆನ್ನಾಗಿ ಅರಿತಿರುವ ವಿದ್ವಾಂಸರಾದ ಡಾ|| ಬೆ.ನಾ.ವಿಜಯೀಂದ್ರ ಆಚಾರ್ಯರು ಈ ಕಾರ್ಯವನ್ನು ಸಮರ್ಥವಾಗಿ ಮುನ್ನಡೆಸುತ್ತಿದ್ದಾರೆ. ಅಲ್ಪಜ್ಞನಾದ ನನ್ನ ಕೈಯಿಂದಲೂ ಈ ಮಹತ್ಕಾರವನ್ನು ಮಾಡಿಸಿದ ಶ್ರೀಪಾದರ ಪ್ರೇರಣೆ ಕರುಣೆಗೆ ನಾನು ಚಿರಋಣಿ. ಶ್ರೀಪಾದರಿಂದ ಸ್ಥಾಪಿಸಲ್ಪಟ್ಟ ತತ್ತ್ವಸಂಶೋಧನ ಸಂಸತ್ ಇದನ್ನು ಪ್ರಕಾಶನಗೊಳಿಸುತ್ತಿದೆ. ಈ ಸಂಸ್ಥೆಯು ಸಜ್ಜನರ ಆಧ್ಯಾತ್ಮಿಕ ಸಾಧನೆಗೆ ಅನುಕೂಲಕರವಾದ ಇನ್ನೂ ಅನೇಕ ಗ್ರಂಥಗಳನ್ನು ಪ್ರಕಾಶಿಸಿ ವಾಙ್ಮಯಪ್ರಪಂಚವನ್ನು ಶ್ರೀಮಂತಗೊಳಿಸಿದೆ. ಮಹಾಭಾರತದ ಆಂಗ್ಲ ಆವೃತ್ತಿ ಮತ್ತು ಸಂಸ್ಕೃತ ಆವೃತ್ತಿಗಳೂ ಸದ್ಯದಲ್ಲಿಯೇ ಉಪಲಬ್ಧವಾಗಲಿದ್ದು ಜಿಜ್ಞಾಸುಗಳು ಈ ಎಲ್ಲಾ ಕಾರ್ಯಗಳ ಸದುಪಯೋಗವನ್ನು ಪಡುವಂತಾಗಲಿ ಎಂದು ಆಶಿಸೋಣ ಹಾಗೂ ಹರಿಗುರುಗಳು ನಮಗೆಲ್ಲರಿಗೂ ಸಜ್ಜ್ಞಾನವನ್ನು ಕೊಡಲಿ ಎಂದು ಪ್ರಾರ್ಥಿಸೋಣ.

**ಕಡಂದಲೆ ಗಣಪತಿ ಭಟ್**
ಉಡುಪಿ



# ವಿಷಯಾನುಕ್ರಮಣಿಕೆ

## ಮಹಾಭಾರತ - ಭಾಗ-೨೨

## ಶಲ್ಯಪರ್ವ

ಪುಟ ಸಂ.

# ವಿಷಯಾನುಕ್ರಮಣಿಕೆ

## ಮಹಾಭಾರತ - ಭಾಗ-೨೨

## ಗದಾಪರ್ವ

ಪುಟ ಸಂ.

|| ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ||

# ಮಹಾಭಾರತ

# ಶಲ್ಯಪರ್ವ

## ೧. ಶಲ್ಯಪರ್ವ

### ಒಂದನೆಯ ಅಧ್ಯಾಯ

ಶಲ್ಯ ಮತ್ತು ದುರ್ಯೋಧನರ ವಧೆಯನ್ನು ಸಂಜಯನ ಮಾತಿನಿಂದ ತಿಳಿದ ಧೃತರಾಷ್ಟ್ರನು ಮೂರ್ಛೆ ಹೊಂದಿದ್ದು. ಎಚ್ಚರಗೊಂಡ ಧೃತರಾಷ್ಟ್ರನನ್ನು ವಿದುರನು ಸಮಾಧಾನಪಡಿಸಿದ್ದು.

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

ಸಮಸ್ತಗುಣಪರಿಪೂರ್ಣನಾದ, ಸಕಲದೋಷದೂರನಾದ, ಸಕಲಸಚ್ಛಾಸ್ತ್ರ-ಪ್ರತಿಪಾದ್ಯನಾದ, ಮುಕ್ತಾಮುಕ್ತನಿಯಾಮಕನಾದ, ಮುಕ್ತಗಮ್ಯನಾದ ಶ್ರೀಮನ್ನಾರಾಯಣನನ್ನು ನಮಸ್ಕರಿಸಿ, ನರೋತ್ತಮನೆನಿಸಿದ ಮುಖ್ಯಪ್ರಾಣನನ್ನೂ, ನರರೂಪಿಯಾದ ಅರ್ಜುನನನ್ನೂ, ಸಕಲಮಂಗಳದೇವತೆಯಾದ ಜಗನ್ಮಾತೆಯಾದ

ಲಕ್ಷ್ಮೀದೇವಿಯನ್ನೂ, ವಿದ್ಯಾಭಿಮಾನಿನಿಯಾದ ಸರಸ್ವತಿಯನ್ನೂ, ಗ್ರಂಥಕರ್ತೃಗಳಾದ ಶ್ರೀವೇದವ್ಯಾಸರನ್ನೂ ನಮಸ್ಕರಿಸಿ, ಜಯಪ್ರದವಾದ ಜಯನಾಮಕವಾದ ಮಹಾಭಾರತವನ್ನು ಆರಂಭಿಸಬೇಕು.

**ಜನಮೇಜಯಃ**

**ಏವಂ ನಿಪಾತಿತೇ ಕರ್ಣೇ ಸಮರೇ ಸವ್ಯಸಾಚಿನಾ ।**
**ಅಲ್ಪಾವಶಿಷ್ಟಾಃ ಕುರವಃ ಕಿಮಕುರ್ವತ ವೈ ದ್ವಿಜ ॥೧॥**

ಮಹಾಭಾರತದ ಹದಿನೇಳನೆಯ ದಿನದ ಯುದ್ಧದಲ್ಲಿ ಸವ್ಯಸಾಚಿ ಎನಿಸಿದ ಅರ್ಜುನನು ಕರ್ಣನನ್ನು ಹೊಡೆದುರುಳಿಸಿದ. ಅನಂತರ ಕೌರವ ಪಕ್ಷದಲ್ಲಿ ಕೆಲವರಷ್ಟೇ ಉಳಿದಿದ್ದರು. ಸೈನ್ಯವು ಕ್ಷೀಣಿಸಿತ್ತು. ಎಲೈ ದ್ವಿಜನೇ! ಉಳಿದ ಕೌರವರು ಏನು ಮಾಡಿದರು?

**ಉದೀರ್ಯಮಾಣಂ ಚ ಬಲಂ ದೃಷ್ಟ್ವಾ ರಾಜಾ ಸುಯೋಧನಃ ।**
**ಪಾಂಡವೈಃ ಪ್ರಾಪ್ತಕಾಲಂ ಚ ಕಿಂ ಪ್ರಾಪದ್ಯತ ಕೌರವಃ ॥೨॥**

ಯುದ್ಧವನ್ನು ಗೆದ್ದುಕೊಂಡ ಪಾಂಡವರ ಸೈನ್ಯದಲ್ಲಿ ಹೊಸ ಹುರುಪು ಕಂಡುಬರುತ್ತಿದೆ. ಕಾಲವು ಪಾಂಡವರಿಗೆ ಅನುಕೂಲವಾಗಿದೆ. ಇದನ್ನು ನೋಡಿದ ದುರ್ಯೋಧನನು ಕಾಲೋಚಿತವಾದ ಯಾವ ಕಾರ್ಯದಲ್ಲಿ ತೊಡಗಿದ?

**ಏತದಿಚ್ಛಾಮ್ಯಹಂ ಶ್ರೋತುಂ ತದಾಚಕ್ಷ್ವ ದ್ವಿಜೋತ್ತಮ ।**
**ನ ಹಿ ತೃಪ್ಯಾಮಿ ಪೂರ್ವೇಷಾಂ ಶೃಣ್ವಾನಶ್ಚರಿತಂ ಮಹತ್ ॥೩॥**

ಹೇ ದ್ವಿಜಶ್ರೇಷ್ಠನೇ! ಈ ಎಲ್ಲಾ ವಿಷಯಗಳನ್ನು ಕೇಳಲು ಬಯಸುತ್ತೇನೆ. ಅವೆಲ್ಲವನ್ನೂ ಹೇಳು. ಏಕೆಂದರೆ ನನ್ನ ಪೂರ್ವಜರ ಅದ್ಭುತವಾದ ಚರಿತ್ರೆಯನ್ನು ಕೇಳಿದಷ್ಟೂ ನನಗೆ ತೃಪ್ತಿ ಉಂಟಾಗುವುದಿಲ್ಲ. ಪುನಃ ಪುನಃ ಕೇಳುವ ಇಚ್ಛೆ ಉಂಟಾಗುತ್ತಿದೆ.

**ವೈಶಂಪಾಯನಃ**

**ತತಃ ಕರ್ಣೇ ಹತೇ ರಾಜನ್ ಧಾರ್ತರಾಷ್ಟ್ರಃ ಸುಯೋಧನಃ ।**
**ಭೃಶಂ ಶೋಕಾರ್ಣವೇ ಮಗ್ನೋ ನಿರಾಶಃ ಸರ್ವತೋಽಭವತ್ ॥೪॥**

ವೈಶಂಪಾಯನರು ಹೇಳುತ್ತಾರೆ– ಮಹಾಭಾರತ ಯುದ್ಧದಲ್ಲಿ ಕರ್ಣನು ಹತನಾದಾಗ ದುರ್ಯೋಧನನು ಬಹಳವಾಗಿ ದುಃಖಿತನಾಗುತ್ತಾನೆ. ಶೋಕಸಾಗರದಲ್ಲಿ ಮುಳುಗಿದ ಅವನನ್ನು ಸರ್ವವಿಧದಲ್ಲಿಯೂ ನಿರಾಶೆಯು ಆವರಿಸುತ್ತದೆ.

**ಹಾ ಕರ್ಣ ಹಾ ಕರ್ಣ ಇತಿ ಶೋಚಮಾನೋ ಮುಹುರ್ಮುಹುಃ ।**
**ಕೃಚ್ಛ್ರಾತ್ ಸ್ವಶಿಬಿರಂ ಪ್ರಾಯಾದ್ಧತಶಿಷ್ಟೈರ್ನೃಪೈಃ ಸಹ ॥೫॥**

''ಹಾ ಕರ್ಣ! ಹಾ ಕರ್ಣ!'' ಎಂಬುದಾಗಿ ಮತ್ತೆ ಮತ್ತೆ ದುಃಖಿಸುತ್ತಾ ಅಳಿದುಳಿದ ರಾಜರೊಡನೆ ತನ್ನ ಶಿಬಿರಕ್ಕೆ ಬಹಳ ಕಷ್ಟದಿಂದ ತೆರಳಿದ.

**ಸ ಸಮಾಶ್ವಾಸ್ಯಮಾನೋಽಪಿ ಹೇತುಭಿಃ ಶಾಸ್ತ್ರನಿಶ್ಚಿತೈಃ ।**
**ದುಃಖಾರ್ತೋ ನಾಲಭಚ್ಛರ್ಮ ಸೂತಪುತ್ರವಧಂ ಸ್ಮರನ್ ॥೬॥**

ದುಃಖಿಸುತ್ತಿರುವ ಸುಯೋಧನನನ್ನು ರಾಜರು ಶಾಸ್ತ್ರದ ಸಹೇತುಕ ಹಿತನುಡಿಗಳಿಂದ ಸಮಾಧಾನಪಡಿಸುತ್ತಾರೆ. ಆದರೂ ಪ್ರಾಣಸ್ನೇಹಿತನಾದ ಕರ್ಣನ ವಧೆಯನ್ನು ನೆನೆಯುತ್ತಾ ಮತ್ತೂ ದುಃಖಿತನಾದ ದುರ್ಯೋಧನನು ಮನಸ್ಸಮಾಧಾನವನ್ನು ಹೊಂದಲಿಲ್ಲ.

**ಸ ದೈವಂ ಬಲವನ್ಮತ್ವಾ ಪ್ರಭಾತೇ ವಿಮಲೇ ಸತಿ ।**
**ಸಂಗ್ರಾಮೇ ನಿಶ್ಚಯಂ ಕೃತ್ವಾ ಪುನರ್ಯುದ್ಧಾಯ ನಿರ್ಯಯೌ ॥೭॥**

'ವಿಧಿಯೇ ಬಲವತ್ತಾದದ್ದು, ಅದೇ ಮುಂದಾಗುವುದನ್ನು ನಿಶ್ಚಯಿಸುತ್ತದೆ' ಎಂದು ಅರಿತ ದುರ್ಯೋಧನನು ಸೂರ್ಯೋದಯವಾಗುತ್ತಿರಲು ಯುದ್ಧದಲ್ಲಿಯೇ ನಿಶ್ಚಯವುಳ್ಳವನಾಗಿ ಮತ್ತೆ ಯುದ್ಧಕ್ಕಾಗಿ ಹೊರಡುತ್ತಾನೆ.

**ಶಲ್ಯಂ ಸೇನಾಪತಿಂ ಕೃತ್ವಾ ವಿಧಿವದ್ ರಾಜಪುಂಗವಃ(ಮ್) ।**
**ರಣಾಯ ನಿರ್ಯಯೌ ರಾಜಾ ಹತಶೇಷೈರ್ನೃಪೈಃ ಸಹ ॥೮॥**

ತೆರವಾದ ಸೇನಾಧಿಪತಿ ಸ್ಥಾನದಲ್ಲಿ ಶ್ರೇಷ್ಠರಾಜನಾದ ಶಲ್ಯನನ್ನು ವಿಧ್ಯುಕ್ತವಾಗಿ ನೇಮಿಸುತ್ತಾನೆ. ಬದುಕುಳಿದ ರಾಜರೊಡನೆ ದುರ್ಯೋಧನನು ಯುದ್ಧಕ್ಕೆ ಹೊರಡುತ್ತಾನೆ.

**ತತಃ ಸುತುಮುಲಂ ಯುದ್ಧಂ ಕುರುಪಾಂಡವಸೇನಯೋಃ ।**
**ಬಭೂವ ಭರತಶ್ರೇಷ್ಠ ದೇವಾಸುರರಣೋಪಮಮ್ । ।೯।।**

ಭರತಶ್ರೇಷ್ಠನೇ! ಕೌರವ-ಪಾಂಡವರ ಸೇನೆಗಳ ಮಧ್ಯೆ ಬಹಳ ಗೊಂದಲಮಯವಾದ ಹಾಗೂ ಭಯಂಕರವಾದ ಯುದ್ಧವು ನಡೆಯುತ್ತದೆ. ಈ ಯುದ್ಧವು ಹಿಂದೆ ದೇವಾಸುರರ ನಡುವೆ ನಡೆದ ಯುದ್ಧದ ಹಾಗೆ ಇತ್ತು.

**ತತಃ ಶಲ್ಯೋ ಮಹಾರಾಜ ಕೃತ್ವಾ ಕದನಮಾಹವೇ ।**
**ಸಸೈನ್ಯೋಽಥ ಮಧ್ಯಾಹ್ನೇ ಧರ್ಮರಾಜೇನ ಘಾತಿತಃ ।।೧೦।।**

ಮಹಾರಾಜ! ಶಲ್ಯನೂ ಕೂಡ ಯುದ್ಧದಲ್ಲಿ ಬಹಳವಾಗಿ ಹೋರಾಡುತ್ತಾನೆ. ಮಧ್ಯಾಹ್ನದ ಸಮಯದಲ್ಲಿ ಧರ್ಮರಾಜನು ಶಲ್ಯನನ್ನೂ ಅವನ ಸೈನ್ಯವನ್ನೂ ಸಾಯಿಸುತ್ತಾನೆ.

**ತತೋ ದುರ್ಯೋಧನೋ ರಾಜಾ ಹತಬಂಧೂ ರಣಾಜಿರಾತ್ ।**
**ಅಪಸೃತ್ಯ ಹ್ರದಂ ಘೋರಂ ವಿವೇಶ ರಿಪುಜಾದ್ಭಯಾತ್ ।।೧೧।।**

ತನ್ನ ಎಲ್ಲಾ ತಮ್ಮಂದಿರನ್ನೂ, ಸಂಬಂಧಿಗಳನ್ನು ಕಳೆದುಕೊಂಡ ದುರ್ಯೋಧನನು ರಣರಂಗವನ್ನು ತೊರೆದು, ಶತ್ರುಗಳಿಂದ ಭಯಗೊಂಡು ಭಯಂಕರವಾದ (ವೈಶಂಪಾಯನ) ಸರೋವರವನ್ನು ಪ್ರವೇಶಿಸಿ ಅಡಗಿಕೊಳ್ಳುತ್ತಾನೆ.

**ಅಥಾಪರಾಹ್ಣೇ ತಸ್ಯಾಹ್ನಃ ಪರಿವಾರ್ಯ ಮಹಾರಥೈಃ ।**
**ಹ್ರದಾದಾಹೂಯ ಯುದ್ಧಾಯ ಭೀಮಸೇನೇನ ಪಾತಿತಃ ।।೧೨।।**

ಇಷ್ಟೆಲ್ಲಾ ನಡೆದ ನಂತರ ಅದೇ ದಿನ ಅಪರಾಹ್ಣದಲ್ಲಿ ಭೀಮಸೇನನು ಮಹಾರಥರನ್ನೆಲ್ಲಾ ಸೋಲಿಸಿ, ಸರೋವರದ ಬಳಿಗೆ ಬರುತ್ತಾನೆ. ಮಡುವಿನಲ್ಲಿ ಅಡಗಿದ ದುರ್ಯೋಧನನನ್ನು ಕಟುನುಡಿಗಳಿಂದ ಯುದ್ಧಕ್ಕಾಗಿ ಹೊರಸೆಳೆದು ಹೊಡೆದುರುಳಿಸುತ್ತಾನೆ.

**ತಸ್ಮಿಂಸ್ತು ನಿಹತೇ ವೀರೇ ಹತಶಿಷ್ಟಾಸ್ತ್ರಯೋ ರಥಾಃ ।**
**ಕೃತವರ್ಮಾ ಕೃಪೋ ದ್ರೌಣಿರ್ಜಘ್ನುಃ ಪಾಂಡವಸೈನಿಕಾನ್ ।।೧೩।।**

ದುರ್ಯೋಧನನು ಹತನಾದ ಮೇಲೆ ಉಳಿದ ಮೂವರು ಮಹಾರಥರು ಕೃತವರ್ಮ, ಕೃಪ ಹಾಗೂ ಅಶ್ವತ್ಥಾಮ. ಇವರು ಪಾಂಡವಸೈನಿಕರನ್ನು ಸದೆಬಡಿದರು.

ತತೋಽಪರಾಹ್ಣಸಮಯೇ ಶಿಬಿರಾದೇತ್ಯ ಸಂಜಯಃ ।
ಪ್ರವಿವೇಶ ಪುರೀಂ ದೀನೋ ದುಃಖಶೋಕಸಮನ್ವಿತಃ ॥೧೪॥

ನಂತರ ಅಪರಾಹ್ಣಕಾಲದಲ್ಲಿ ಸಂಜಯನು ದುಃಖ ಹಾಗೂ ಶೋಕದಿಂದ ದೀನನಾಗಿ ಶಿಬಿರದಿಂದ ಹಿಂತಿರುಗಿ ಹಸ್ತಿನಾಪುರಕ್ಕೆ ಬಂದನು.

ಪ್ರವಿಶ್ಯ ತು ಪುರಂ ತೂರ್ಣಂ ಭುಜಾವುದ್ಯಮ್ಯ ದುಃಖಿತಃ ।
ವೇಪಮಾನಸ್ತದಾ ರಾಜ್ಞಃ ಪ್ರವಿವೇಶ ನಿವೇಶನಮ್ ॥೧೫॥

ಪಟ್ಟಣವನ್ನು ಪ್ರವೇಶಿಸಿದ ಸಂಜಯನು ಭುಜಗಳನ್ನು ಎತ್ತಿಕೊಂಡು ದುಃಖದಿಂದ ನಡುಗುತ್ತಾ ರಾಜನ ಅರಮನೆಯನ್ನು ಪ್ರವೇಶಿಸಿದನು.

ಧಾವತಶ್ಚಾಪ್ಯಪಶ್ಯತ್ ಸ ತತ್ರತ್ಯಾನ್ ಪುರುಷರ್ಷಭಾನ್ ।
ನಷ್ಟಚಿತ್ತಾನಿವೋನ್ಮತ್ತಾನ್ ಶೋಕೇನ ಭೃಶದುಃಖಿತಾನ್ ॥೧೬॥

ಅರಮನೆಯಲ್ಲಿ ಅವನ ಕಂಡ ದೃಶ್ಯ ಹೀಗಿತ್ತು – ಅಲ್ಲಿರುವ ಪುರುಷಶ್ರೇಷ್ಠರು ಮನಸ್ಸಿನ ಸ್ಥಿಮಿತವನ್ನು ಕಳೆದುಕೊಂಡು, ಬಹಳ ದುಃಖಿತರಾಗಿ, ಹುಚ್ಚರಂತೆ ಆ ಕಡೆ ಈ ಕಡೆ (ಅತ್ತಿತ್ತ) ಓಡಾಡುತ್ತಿದ್ದರು.

ದೃಷ್ಟ್ವೈವ ನರಾನ್ ಶೀಘ್ರಂ ವ್ಯಾಜಹಾರಾತಿದುಃಖಿತಾನ್ ।
ರುರೋದ ಚ ನರವ್ಯಾಘ್ರ ಹಾ ರಾಜನ್ನಿತಿ ದುಃಖಿತಃ ॥೧೭॥

ಅಹೋ ಬತ ವಿಪನ್ನೋಽಸ್ಮಿ ನಿಧನೇನ ಮಹಾತ್ಮನಃ ।
ಅಸೌ ಸುಬಲವಾನ್ ಕಾಲೋ ಗತಿಶ್ಚ ವಿಷಮಾ ತಥಾ ।
ಶಕ್ರತುಲ್ಯಬಲಾಃ ಸರ್ವೇ ಯತ್ರಾಹನ್ಯಂತ ಪಾರ್ಥಿವಾಃ ॥೧೮॥

ಹೀಗೆ ಬಹುದುಃಖಿತರಾದ ಅರಮನೆಯ ಜನರನ್ನು ಕಂಡು ಸಂಜಯನೂ ದುಃಖಿತನಾಗುತ್ತಾನೆ. ಅಳುತ್ತಾ ಹೀಗೆ ಹೇಳಿದ, ''ನರಶ್ರೇಷ್ಠ! ರಾಜನೇ! ಮಹಾತ್ಮ ಸುಯೋಧನನ ಸಾವಿನಿಂದ ಬಹಳ ದುಃಖಿತನಾಗಿದ್ದೇನೆ. ಕಾಲವು ಬಹಳ

ಬಲಶಾಲಿಯಾದದ್ದು. ಆದರ ಗತಿಯು ನಮಗೆ ವಿಪರೀತವಾಗಿದೆ. ಏಕೆಂದರೆ ಪರಾಕ್ರಮದಲ್ಲಿ ಇಂದ್ರನಿಗೆ ಸದೃಶರಾದ ರಾಜರು ಈ ಯುದ್ಧದಲ್ಲಿ ಮಡಿದಿದ್ದಾರೆ.''

ವೈಶಂಪಾಯನಃ

ದೃಷ್ಟ್ವೈವ ಹಿ ಪುರೇ ರಾಜನ್ ಜನಃ ಸರ್ವೋ ಹಿ ಸಂಜಯಮ್ ।
ಶೋಕೇನ ಮಹತಾ ಯುಕ್ತಃ ಸರ್ವತೋ ರಾಜಸತ್ತಮ ।
ಪ್ರರುರೋದ ಭಯೋದ್ವಿಗ್ನೋ ಹಾ ರಾಜನ್ನಿತಿ ಸಸ್ವನಮ್ ॥೧೯॥

ರಾಜೋತ್ತಮನೇ! ಅರಮನೆಯಲ್ಲಿ ಸಂಜಯನನ್ನು ಕಂಡಾಕ್ಷಣ ಎಲ್ಲಾ ಜನರೂ ಬಹಳ ದುಃಖದಿಂದ ಕೂಡಿದವರಾಗಿ ಹಾಗೂ ಭಯದಿಂದ ಕಳವಳಗೊಂಡವರಾಗಿ ''ಹಾ! ರಾಜನ್!'' ಎಂದು ಜೋರಾಗಿ ಶಬ್ದಮಾಡುತ್ತಾ ಅತ್ತರು.

ಆಕುಮಾರಂ ನರವ್ಯಾಘ್ರ ತತ್ ಪುರಂ ವೈ ಸಮಂತತಃ ।
ಆರ್ತನಾದಂ ಮಹಚ್ಚಕ್ರೇ ಶ್ರುತ್ವಾ ವಿನಿಹತಂ ನೃಪಮ್ ॥೨೦॥

ನರೋತ್ತಮನೇ! ರಾಜ ದುರ್ಯೋಧನನು ಮಡಿದ ವಾರ್ತೆಯನ್ನು ಕೇಳಿ ಅರಮನೆಯಲ್ಲಿ ಮಕ್ಕಳಾದಿಯಾಗಿ ಎಲ್ಲರೂ ಜೋರಾಗಿ ಅಳುತ್ತಾರೆ. ಇಡೀ ಅರಮನೆಯೇ ದುಃಖದಲ್ಲಿ ಮುಳುಗಿತು.

ಪಪಾತ ಚ ತತೋ ಭೂಮೌ ಸ ಚೈವ ಪುರುಷರ್ಷಭಃ ।
ಶ್ರುತ್ವಾ ಸ ತಾನಿವೋನ್ಮತ್ತಾನ್ ಶೋಕೇನ ಭೃಶಪೀಡಿತಾನ್ ॥೨೧॥

ಬಹುದುಃಖಿತರಾಗಿ ಉನ್ಮತ್ತರಂತೆ ವರ್ತಿಸುತ್ತಿದ್ದ ಅರಮನೆಯ ಜನರ ದುಃಖದ ಆರ್ತನಾದವನ್ನು ಕೇಳಿದ ಧೃತರಾಷ್ಟ್ರನು ಭೂಮಿಯಲ್ಲಿ ಕುಸಿದು ಬೀಳುತ್ತಾನೆ.

ತಥಾ ಸ ವಿಹ್ವಲಃ ಸೂತಃ ಪ್ರವಿಶ್ಯ ನೃಪತಿಕ್ಷಯಮ್ ।
ದದರ್ಶ ನೃಪತಿಶ್ರೇಷ್ಠಂ ಪ್ರಜ್ಞಾಚಕ್ಷುಷಮೀಶ್ವರಮ್ ॥೨೨॥

ನಂತರ ಒಳಗೆ ಪ್ರವೇಶಿಸಿದ, ದುಃಖವಿಹ್ವಲನಾದ ಸಂಜಯನು ಬಾಹ್ಯಕಣ್ಣನ್ನು ಕಳೆದುಕೊಂಡಿದ್ದರೂ ಪ್ರಜ್ಞಾನೇತ್ರವನ್ನು ಹೊಂದಿದ ಧೃತರಾಷ್ಟ್ರನನ್ನು ನೋಡುತ್ತಾನೆ.

ದೃಷ್ಟ್ವಾ ಚಾಸೀನಮನಘಂ ಸಮಂತಾತ್ ಪರಿವಾರಿತಮ್ ।
ಸ್ನುಷಾಭಿರ್ಭರತಶ್ರೇಷ್ಠ ಗಾಂಧಾರ್ಯಾ ವಿದುರೇಣ ಚ ॥೨೩॥

ತಥಾಽನ್ಯೈಶ್ಚ ಸುಹೃದ್ಭಿಶ್ಚ ಜ್ಞಾತಿಭಿಶ್ಚ ಹಿತೈಷಿಭಿಃ ।
ತಮೇವ ಚಾರ್ಥಂ ಧ್ಯಾಯಂತಂ ಕರ್ಣಸ್ಯ ನಿಧನಂ ಪ್ರತಿ ॥೨೪॥

ರುದನ್ನೇವಾಬ್ರವೀದ್ವಾಕ್ಯಂ ರಾಜಾನಂ ಜನಮೇಜಯ ।
ನಾತಿಹೃಷ್ಟಮನಾಃ ಸೂತೋ ಬಾಷ್ಪಸಂದಿಗ್ಧಯಾ ಗಿರಾ ॥೨೫॥

ಭರತಶ್ರೇಷ್ಠ! ನಿಷ್ಪಾಪಿಯಾದ ಧೃತರಾಷ್ಟ್ರನನ್ನು ಸೊಸೆಯಂದಿರು, ಗಾಂಧಾರಿ ಹಾಗೂ ವಿದುರ ಮೊದಲಾದವರು ಸುತ್ತಲೂ ಸುತ್ತುವರಿದಿದ್ದಾರೆ. ಹಾಗೆಯೇ ಬೇರೆ ಸ್ನೇಹಿತರು, ಬಾಂಧವರು ಹಾಗೂ ಹಿತೈಷಿಗಳು ಸೇರಿದ್ದಾರೆ. ರಾಜನಾದರೂ ಕರ್ಣನ ಮರಣವನ್ನೇ ನೆನೆಸಿಕೊಳ್ಳುತ್ತಿದ್ದಾನೆ. ಹೇ ಜನಮೇಜಯ! ಇಂತಹ ಧೃತರಾಷ್ಟ್ರನನ್ನು ನೋಡಿದ ಸಂಜಯನು ಅಸಂತುಷ್ಟಮನಸ್ಸುಳ್ಳವನಾಗಿ, ಕಣ್ಣೀರಿನಿಂದ ಗಂಟಲು ಕಟ್ಟಿದವನಾಗಿ ರಾಜ ಧೃತರಾಷ್ಟ್ರನಿಗೆ ಹೀಗೆ ಹೇಳುತ್ತಾನೆ.

ಸಂಜಯಃ

ಸಂಜಯೋಽಹಂ ನರವ್ಯಾಘ್ರ ನಮಸ್ತೇ ಭರತರ್ಷಭ ॥೨೬॥

ಮದ್ರಾಧಿಪೋ ಹತಃ ಶಲ್ಯಃ ಸೌಬಲಶ್ಶಕುನಿಸ್ತಥಾ ।
ಉಲೂಕಃ ಪುರುಷವ್ಯಾಘ್ರ ಕೈತವ್ಯೋ ದೃಢವಿಕ್ರಮಃ ॥೨೭॥

ಹೇ ನರಶ್ರೇಷ್ಠ! ನಾನು ಸಂಜಯ ಬಂದಿದ್ದೇನೆ. ನಿನಗೆ ನಮಸ್ಕಾರ. ಯುದ್ಧದಲ್ಲಿ ಮದ್ರದೇಶಾಧಿಪತಿಯಾದ ಶಲ್ಯನೂ, ಸುಬಲನ ಮಗನಾದ ಶಕುನಿಯೂ, ಕಿತವನ ಮಗನಾದ, ಒಳ್ಳೆಯ ಪರಾಕ್ರಮಿಯಾದ ಉಲೂಕ ಇವರೇ ಮೊದಲಾದವರು ಯುದ್ಧದಲ್ಲಿ ಮಡಿದಿದ್ದಾರೆ.

ಸಂಶಪ್ತಕಾ ಹತಾಃ ಸರ್ವೇ ಕಾಂಭೋಜಾಶ್ಚ ಶಕೈಸ್ಸಹ ।
ಮ್ಲೇಚ್ಛಾಶ್ಚ ಪಾರ್ವತೀಯಾಶ್ಚ ಯವನಾಶ್ಚ ನಿಪಾತಿತಾಃ ।
ಮತ್ಸ್ಯಾಶ್ಚೈವ ಮಹಾರಾಜನ್ ಶೂರಸೇನಾಶ್ಚ ಪಾತಿತಾಃ ॥೨೮॥

ರಾಜನೇ, ಸಂಶಪ್ತಕರು, ಕಾಂಭೋಜದೇಶದ ಯೋಧರು, ಶಕರು, ಮ್ಲೇಚ್ಛರು, ಪರ್ವತವಾಸಿ ಯೋಧರು, ಯವನರು, ಮತ್ಸ್ಯದೇಶದ ಯೋಧರು, ಶೂರಸೇನರು ಇವರೆಲ್ಲರೂ ಯುದ್ಧದಲ್ಲಿ ಪ್ರಾಣವನ್ನು ಕಳೆದುಕೊಂಡಿದ್ದಾರೆ.

**ಪ್ರಾಚ್ಯಾ ಹತಾ ಮಹಾರಾಜ ದಾಕ್ಷಿಣಾತ್ಯಾಶ್ಚ ಸರ್ವಶಃ ।**
**ಉದೀಚ್ಯಾಶ್ಚ ಹತಾಸ್ಸರ್ವೇ ಪ್ರತೀಚ್ಯಾಶ್ಚ ಪರಂತಪ ॥೨೯॥**

ಮಹಾರಾಜ। ಶತ್ರುತಾಪಕರ! ಪೂರ್ವ, ದಕ್ಷಿಣ, ಉತ್ತರ, ಪಶ್ಚಿಮ ದಿಕ್ಕಿನ ಯೋಧರು ಎಲ್ಲರೂ ಯುದ್ಧದಲ್ಲಿ ಮಡಿದಿದ್ದಾರೆ.

**ರಾಜಾನೋ ರಾಜಪುತ್ರಾಶ್ಚ ಸರ್ವೇ ವಿನಿಹತಾ ನೃಪ ।**
**ಕರ್ಣಪುತ್ರೋ ಹತಶ್ಶೂರಃ ವೃಷಸೇನೋ ಮಹಾಬಲಃ ॥೩೦॥**

ರಾಜರು, ರಾಜಕುಮಾರರು ಎಲ್ಲರೂ ನಷ್ಟರಾಗಿದ್ದಾರೆ. ಮಹಾಬಲಶಾಲಿಯಾದ ಶೂರನಾದ ಕರ್ಣಪುತ್ರ ವೃಷಸೇನನೂ (ಸತ್ಯಸೇನನೂ) ಹತನಾಗಿದ್ದಾನೆ.

**ದುರ್ಯೋಧನೋ ಹತೋ ರಾಜನ್ ಯಥೋಕ್ತಂ ಪಾಂಡುಸೂನುನಾ ।**
**ಭಗ್ನಸಕ್ಥಿರ್ಮಹಾರಾಜ ಶೇತೇ ಪಾಂಸುಷು ರೂಷಿತಃ ॥೩೧॥**

ಮಹಾರಾಜ! ಹಿಂದೆ ಭೀಮಸೇನನು ಪ್ರತಿಜ್ಞೆಮಾಡಿದ ರೀತಿಯಲ್ಲಿಯೇ ದುರ್ಯೋಧನನು ತೊಡೆಮುರಿದು ಧೂಳಿನಿಂದ ಲೇಪಿತನಾಗಿ ಭೂಮಿಯಲ್ಲಿ ಮಲಗಿದ್ದಾನೆ.

**ಧೃಷ್ಟದ್ಯುಮ್ನೋ ಹತೋ ರಾಜನ್ ಶಿಖಂಡೀ ಚಾಪರಾಜಿತಃ ।**
**ಉತ್ತಮೌಜಾ ಯುಧಾಮನ್ಯುಃ ತಥಾ ಸರ್ವೇ ಪ್ರಭದ್ರಕಾಃ ॥೩೨॥**

**ಪಾಂಚಾಲಾಶ್ಚ ಮಹಾರಾಜ ಚೇದಯಶ್ಚ ನಿಷೂದಿತಾಃ ।**
**ತವ ಪುತ್ರಾಃ ಹತಾಸ್ಸರ್ವೇ ದ್ರೌಪದೇಯಾಶ್ಚ ಭಾರತ ॥೩೩॥**

ರಾಜನೇ! ಇನ್ನು ಪಾಂಡವರ ಕಡೆಯಲ್ಲಿ ಧೃಷ್ಟದ್ಯುಮ್ನನೂ ಹತನಾಗಿದ್ದಾನೆ. ಸದಾ ಜಯಶಾಲಿಯಾದ ಶಿಖಂಡಿಯೂ ಮಡಿದಿದ್ದಾನೆ. ಉತ್ತಮೌಜ, ಯುಧಾಮನ್ಯು, ಪ್ರಭದ್ರಕರು, ಪಾಂಚಾಲರು, ಚೇದಿದೇಶದ ಯೋಧರು, ಇವರೆಲ್ಲರೂ ಹತರಾಗಿದ್ದಾರೆ.

ಭರತಕುಲಪ್ರಸೂತನೇ! ನಿನ್ನ ಎಲ್ಲಾ ಮಕ್ಕಳೂ ಯುದ್ಧದಲ್ಲಿ ಮಡಿದಿದ್ದಾರೆ. ದ್ರೌಪದಿಯ ಕುಮಾರರಾದ ಉಪಪಾಂಡವರೂ ಸತ್ತಿದ್ದಾರೆ.

ನರಾಃ ವಿನಿಹತಾಸ್ಸರ್ವೇ ಗಜಾಶ್ಚ ವಿನಿಷೂದಿತಾಃ ।
ರಥಿನಶ್ಚ ನರವ್ಯಾಘ್ರ ತಥಾಽಶ್ವಾ ನಿಹತಾ ಯುಧಿ ॥೩೪॥

ನರಶ್ರೇಷ್ಠ! ಯುದ್ಧದಲ್ಲಿ ಎಲ್ಲಾ ಪದಾತಿಗಳು, ಆನೆಗಳು, ರಥಿಕರು ಹಾಗೂ ಕುದುರೆಗಳು ಎಲ್ಲರೂ ಸತ್ತಿದ್ದಾರೆ.

ನಿಶ್ಶೇಷಂ ಶಿಬಿರಂ ರಾಜನ್ ತಾವಕಾನಾಂ ಕೃತಂ ಪ್ರಭೋ ।
ಪಾಂಡವಾನಾಂ ಚ ಶೂರಾಣಾಂ ಸಮಾಸಾದ್ಯ ಪರಸ್ಪರಮ್ ॥೩೫॥

ರಾಜನೇ! ನಿನ್ನ ಹಾಗೂ ಪಾಂಡವರ ಸೈನ್ಯವು ಪರಸ್ಪರ ಹೋರಾಡಿ ಸತ್ತಿದೆ. ಎರಡೂ ಕಡೆಯ ಯುದ್ಧ ಶಿಬಿರಗಳು ಖಾಲಿಯಾಗಿವೆ.

ಪ್ರಾಯಃ ಸ್ತ್ರೀಶೇಷಮಭವತ್ ಜಗತ್ ಕಾಲೇನ ಮೋಹಿತಮ್ ।
ಸಪ್ತ ವೈ ಪಾಂಡವಾಶ್ಶಿಷ್ಟಾ ಧಾರ್ತರಾಷ್ಟ್ರಾಃ ತ್ರಯೋ ಜನಾಃ ॥೩೬॥

ಬಹುಶಃ ಕಾಲಪಾಶಕ್ಕೊಳಗಾಗಿ ಮೋಹಕ್ಕೊಳಗಾದ ಜಗತ್ತಿನಲ್ಲಿ ಸ್ತ್ರೀಯರು ಮಾತ್ರ ಉಳಿದಿದ್ದಾರೆ. ಪಾಂಡವರಲ್ಲಿ ಏಳು ಮಂದಿ ಹಾಗೂ ಕೌರವರ ಕಡೆಯಲ್ಲಿ ಮೂವರು ಉಳಿದಿದ್ದಾರೆ.

ತೇ ಚೈವ ಭ್ರಾತರಃ ಪಂಚ ವಾಸುದೇವೋಽಥ ಸಾತ್ಯಕಿಃ ।
ಕೃಪಶ್ಚ ಕೃತವರ್ಮಾ ಚ ದ್ರೌಣಿಶ್ಚ ಜಯತಾಂ ವರಃ ॥೩೭॥

ಪಾಂಡವರಲ್ಲಿ ಧರ್ಮರಾಜ ಮೊದಲಾದ ಪಂಚ ಪಾಂಡವರು, ಶ್ರೀ ಕೃಷ್ಣ ಹಾಗೂ ಸಾತ್ಯಕಿ ಇವರು ಉಳಿದುಕೊಂಡಿದ್ದಾರೆ. ಕೌರವರ ಕಡೆಯಲ್ಲಿ ಕೃಪಾಚಾರ್ಯ, ಕೃತವರ್ಮ ಹಾಗೂ ಜಯಶಾಲಿಯಾದ ಅಶ್ವತ್ಥಾಮ ಇವರು ಉಳಿದಿದ್ದಾರೆ.

ಏತೇ ಶೇಷಾ ಮಹಾರಾಜ ರಥಿನೋ ರಾಜಸತ್ತಮ ।
ಅಕ್ಷೋಹಿಣೀನಾಮಷ್ಟಾನಾಂ ದಶಾನಾಂ ಚ ನರೇಶ್ವರ ।
ಏತೇ ಶೇಷಾ ಮಹಾರಾಜ ಸರ್ವೇಽನ್ಯೇ ನಿಧನಂ ಗತಾಃ ॥೩೮॥

ಹೇ ರಾಜಶ್ರೇಷ್ಠ! ಪಾಂಡವರ ಏಳು ಅಕ್ಷೋಹಿಣೀ ಸೈನ್ಯ ಹಾಗೂ ಕೌರವರ ಹನ್ನೊಂದು ಅಕ್ಷೌಹಿಣಿ ಸೈನ್ಯದಲ್ಲಿ ಈಗ ಉಳಿದಿರುವವರು ಇವರು ಮಾತ್ರ. ಮಹಾರಾಜ! ಉಳಿದೆಲ್ಲರೂ ನಿಧನ ಹೊಂದಿದ್ದಾರೆ.

ಕಾಲೇನ ನಿಹತಂ ಸರ್ವಂ ಜಗದ್ವೈ ಭರತರ್ಷಭ ।
ದುರ್ಯೋಧನಂ ವೈ ಪುರತಃ ಕೃತ್ವಾ ಸರ್ವೇ ಹತಾ ನರಾಃ ॥೩೯॥

ಭರತಶ್ರೇಷ್ಠನೇ! ಇಡೀ ಜಗತ್ತು ಕಾಲನಾಮಕ ಭಗವಂತನಿಂದ ಹತವಾಗಿದೆ. ದುರ್ಯೋಧನನನ್ನು ಮುಂದಿಟ್ಟುಕೊಂಡು ಎಲ್ಲಾ ಜನರೂ ಮೃತರಾಗಿದ್ದಾರೆ.

ವೈಶಂಪಾಯನಃ

ಏತಚ್ಛ್ರುತ್ವಾ ವಚಃ ಕ್ರೂರಂ ಧೃತರಾಷ್ಟ್ರೋ ಜನೇಶ್ವರಃ ।
ನಿಪಪಾತ ಮಹಾರಾಜ ಗತಸತ್ವೋ ಮಹೀತಳೇ ॥೪೦॥

ವೈಶಂಪಾಯನರು ಹೇಳಿದರು – ಮಹಾರಾಜ! ಕರ್ಣಕಠೋರವಾದ ಈ ಮಾತನ್ನು ಕೇಳಿದ ಚಕ್ರವರ್ತಿ ಧೃತರಾಷ್ಟ್ರನು ಶಕ್ತಿ ಕಳೆದುಕೊಂಡು ನೆಲದಲ್ಲಿ ಕುಸಿದುಬಿದ್ದನು.

ತಸ್ಮಿನ್ ನಿಪತಿತೇ ವೀರೇ ವಿದುರೋಽಪಿ ಮಹಾಯಶಾಃ ।
ನಿಪಪಾತ ಮಹಾರಾಜ ಪುತ್ರವ್ಯಸನಕರ್ಶಿತಃ ॥೪೧॥

ಧೃತರಾಷ್ಟ್ರನು ಕುಸಿದು ಬೀಳಲು ಮಹಾಕೀರ್ತಿಶಾಲಿಯಾದ ವಿದುರನೂ ಕೂಡ ರಾಜಪುತ್ರರ ವಿಷಯದಲ್ಲಿ ದುಃಖಕ್ಕೊಳಗಾಗಿ ಕುಸಿಯುತ್ತಾನೆ.

ಗಾಂಧಾರೀ ಚ ಮಹಾಭಾಗಾ ಸರ್ವಾಶ್ಚ ಕುರುಯೋಷಿತಃ ।
ಪತಿತಾಸ್ಸಹಸಾ ಭೂಮೌ ಶ್ರುತ್ವಾ ಘೋರತರಂ ವಚಃ ॥೪೨॥

ಅತಿಭಯಂಕರವಾದ ಮಾತನ್ನು ಕೇಳಿ ಮಹಾಭಾಗ್ಯವಂತಳಾದ ಗಾಂಧಾರಿ ಹಾಗೂ ಎಲ್ಲಾ ಕೌರವಸ್ತ್ರೀಯರೂ ಕೂಡಲೇ ನೆಲದಲ್ಲಿ ಕುಸಿದು ಬಿದ್ದರು.

ನಿಃಸಂಜ್ಞಂ ಪತಿತಂ ಭೂಮೌ ತದಾಸೀದ್ರಾಜಮಂಡಲಮ್ ।
ವಿಲಾಪಂಮೂರ್ಚ್ಛೋಪಹತಂ ಚಿತ್ರಂ ನ್ಯಸ್ತಂ ಪಟೇ ಯಥಾ ॥೪೩॥

ಸ್ತ್ರೀಯರು, ಪುರುಷರೂ ಸೇರಿ ಇಡೀ ರಾಜನ ಅಂತಃಪುರದ ಸಕಲಪರಿವಾರವೇ ನೆಲದಲ್ಲಿ ಬಿದ್ದು ಎಲ್ಲರ ಸದ್ದು ಅಡಗಿದೆ. ದುಃಖದಿಂದ ಮೂರ್ಛಾವಸ್ಥೆಗೆ ಹೋಗಿದೆ. ಈ ದೃಶ್ಯವು ಬಟ್ಟೆಯೊಂದರಲ್ಲಿ ಬರೆದ ಚಿತ್ರದ ಹಾಗೆ ಇತ್ತು.

ಕೃಚ್ಛ್ರೇಣ ತು ತತಸ್ತತ್ರ ಧೃತರಾಷ್ಟ್ರೋ ಮಹೀಪತಿಃ ।
ಶನೈರಲಭತ ಪ್ರಾಣಾನ್ ಪುತ್ರವ್ಯಸನಕರ್ಶಿತಃ ॥೪೪॥

ಅನಂತರ ಪುತ್ರಶೋಕಕ್ಕೊಳಗಾದ ರಾಜ ಧೃತರಾಷ್ಟ್ರನು ಬಹಳ ಕಷ್ಟದಿಂದ ನಿಧಾನವಾಗಿ ಪ್ರಾಣವನ್ನು (ಚೇತನ) ಹೊಂದಿದನು.

ಲಬ್ಧ್ವಾ ತು ನೃಪತಿಃ ಪ್ರಾಣಾನ್ ವೇಪಮಾನಃ ಪುನಃ ಪುನಃ ।
ನಿರೀಕ್ಷ್ಯ ಚ ದಿಶಸ್ಸರ್ವಾಃ ಕ್ಷತ್ತಾರಂ ವಾಕ್ಯಮಬ್ರವೀತ್ ॥೪೫॥

ಪ್ರಾಣಶಕ್ತಿಯಿಂದ ಜಾಗೃತನಾದ ಧೃತರಾಷ್ಟ್ರನು ಮತ್ತೆ ಮತ್ತೆ ನಡುಗುತ್ತಾನೆ. ತನ್ನ ಸುತ್ತಲಿನ ದೃಶ್ಯವನ್ನು ನೋಡಿ ವಿದುರನಿಗೆ ಹೇಳುತ್ತಾನೆ.

ಧೃತರಾಷ್ಟ್ರಃ

ವಿದ್ವನ್ ಕ್ಷತ್ತರ್ಮಹಾಪ್ರಾಜ್ಞ ತ್ವಂ ಗತಿರ್ಭರತರ್ಷಭ ।
ಮಮಾನಾಥಸ್ಯ ಸುಭೃಶಂ ಪುತ್ರಹೀನಸ್ಯ ಸರ್ವಶಃ ॥೪೬॥

ಧೃತರಾಷ್ಟ್ರನು ಹೇಳಿದನು– ವಿದ್ವನ್! ಮಹಾಜ್ಞಾನಿಯೇ! ಭರತಶ್ರೇಷ್ಠ! ವಿದುರ! ಮಕ್ಕಳನ್ನು ಕಳೆದುಕೊಂಡು ಎಲ್ಲಾ ರೀತಿಯಲ್ಲಿ ಅನಾಥನಾದ ನನಗೆ ಅತಿಶಯವಾದ ಆಶ್ರಯ ನೀನೇ ಆಗಿದ್ದಿ.

ವೈಶಂಪಾಯನಃ

ಏವಮುಕ್ತ್ವಾ ತತೋ ಭೂಯೋ ನಿಸ್ಸಂಜ್ಞಃ ಪತಿತೋ ಭುವಿ ॥೪೭॥

ವೈಶಂಪಾಯನರು ಹೇಳಿದರು– ಹೀಗೆ ಹೇಳಿದ ನಂತರ ಧೃತರಾಷ್ಟ್ರನು ಮತ್ತೆ ಮೂರ್ಛಿತನಾಗಿ ನೆಲದಲ್ಲಿ ಬಿದ್ದನು.

ತಂ ತಥಾ ಪತಿತಂ ದೃಷ್ಟ್ವಾ ಬಾಂಧವಾಸ್ತಸ್ಯ ಕೇಚನ ।
ತೇ ಶೀತೈಸ್ಸಿಷಿಚುಸ್ತೋಯೈಃ ವಿವಿಜುರ್ವ್ಯಜನೈರಪಿ ॥೪೮॥

ಹೀಗೆ ಬಿದ್ದ ರಾಜನನ್ನು ನೋಡಿದ ಅವನ ಕೆಲವು ಬಾಂಧವರು ಶೀತೋದಕವನ್ನು ಸಿಂಪಡಿಸಿ ಬೀಸಣಿಕೆಗಳಿಂದ ಗಾಳಿ ಬೀಸಿದರು.

**ತೂಷ್ಣೀಮಾಸೀನ್ಮಹೀಪಾಲಃ ಪುತ್ರವ್ಯಸನಕರ್ಶಿತಃ ॥೪೯॥**

ಮಕ್ಕಳ ದುಃಖದಿಂದ ಕೃಶನಾದ ರಾಜನು ಏನೂ ಮಾತನಾಡದೆ ಸುಮ್ಮನೆ ಇದ್ದ.

**ಸ ತು ದೀರ್ಘೇಣ ಕಾಲೇನ ಪ್ರತ್ಯಾಶ್ವಸ್ತೋ ಮಹೀಪತಿಃ ।**
**ನಿಃಶ್ವಸನ್ ಪನ್ನಗ ಇವ ಕುಂಭಕ್ಷಿಪ್ತೋಽಭವನ್ನೃಪ ॥೫೦॥**

ರಾಜನೇ! ದೀರ್ಘಸಮಯದ ನಂತರ ಎಚ್ಚರಗೊಂಡ ಧೃತರಾಷ್ಟ್ರನು ಘಟದೊಳಗಿರಿಸಿದ ಹಾವಿನ ಹಾಗೆ ದೀರ್ಘವಾಗಿ ಉಸಿರಾಡುತ್ತಾನೆ.

**ಸಂಜಯೋಽಪ್ಯರುದತ್ ತತ್ರ ದೃಷ್ಟ್ವಾ ರಾಜಾನಮಾತುರಮ್ ।**
**ತಥಾ ಸರ್ವಾಃ ಸ್ತ್ರಿಯಶ್ಚೈವ ಗಾಂಧಾರೀ ಚ ಯಶಸ್ವಿನೀ ॥೫೧॥**

ದುಃಖಕ್ಕೊಳಗಾದ ರಾಜ ಧೃತರಾಷ್ಟ್ರನನ್ನು ನೋಡಿ ಸಂಜಯನೂ ಅಳುತ್ತಾನೆ. ಹಾಗೆಯೇ ಎಲ್ಲಾ ಸ್ತ್ರೀಯರೂ ಮತ್ತು ಯಶಸ್ವಿನಿಯಾದ ಗಾಂಧಾರಿಯೂ ಅಳುತ್ತಾರೆ.

**ತತೋ ದೀರ್ಘೇಣ ಕಾಲೇನ ವಿದುರಂ ವಾಕ್ಯಮಬ್ರವೀತ್ ।**
**ಧೃತರಾಷ್ಟ್ರೋ ನರವ್ಯಾಘ್ರೋ ಮುಹ್ಯಮಾನಃ ಪುನಃ ಪುನಃ ॥೫೨॥**

ಅನಂತರ ತುಂಬಾ ಸಮಯ ಕಳೆದ ಮೇಲೆ ನರಶ್ರೇಷ್ಠನಾದ ಧೃತರಾಷ್ಟ್ರನು ಮತ್ತೆ ಮತ್ತೆ ಮೂರ್ಛಿತನಾಗುತ್ತಾ ವಿದುರನಿಗೆ ಹೇಳುತ್ತಾನೆ.

ಧೃತರಾಷ್ಟ್ರ

**ಗಚ್ಛಂತು ಯೋಷಿತಸ್ಸರ್ವಾಃ ಗಾಂಧಾರೀ ಚ ಯಶಸ್ವಿನೀ ।**
**ತಥೇಮೇ ಸುಹೃದಸ್ಸರ್ವೇ ಮುಹ್ಯತೇ ಮೇ ಮನೋ ಭೃಶಮ್ ॥೫೩॥**

ಅರಮನೆಯ ಎಲ್ಲಾ ಸ್ತ್ರೀಯರೂ, ಯಶಸ್ವಿನಿಯಾದ ಗಾಂಧಾರಿಯೂ ಹಾಗೂ ಈ ಎಲ್ಲಾ ಸುಹೃತ್ಸಂಬಂಧಿಗಳೂ ಇಲ್ಲಿಂದ ಹೊರಟುಹೋಗಲಿ. ನನ್ನ ಮನಸ್ಸು ತುಂಬಾ ಭ್ರಾಂತವಾಗಿದೆ.

### ವೈಶಂಪಾಯನಃ

ಏವಮುಕ್ತಸ್ತತಃ ಕ್ಷತ್ತಾ ತಾಃ ಸ್ತ್ರಿಯೋ ಭರತರ್ಷಭ ।
ವಿಸರ್ಜಯಾಮಾಸ ತದಾ ಮುಹ್ಯಮಾನೋ ನರಾಧಿಪ ॥೩೪॥

ಭರತಶ್ರೇಷ್ಠನೇ! ನರಾಧಿಪನೇ! ಧೃತರಾಷ್ಟ್ರನು ಹೀಗೆ ಹೇಳಿದಾಗ, ದುಃಖದಿಂದ ಮತ್ತೆ ಮತ್ತೆ ಮೂಢನಾದ ವಿದುರನು ಎಲ್ಲಾ ಸ್ತ್ರೀಯರನ್ನು ನಿಧಾನವಾಗಿ ಕಳುಹಿಸುತ್ತಾನೆ.

ನಿರ್ಜಗ್ಮುಶ್ಚ ತತಸ್ಸರ್ವಾಃ ತಾಸ್ತ್ರಿಯೋ ಜನಮೇಜಯ ।
ಸುಹೃದಶ್ಚ ತಥಾ ಸರ್ವೇ ದೃಷ್ಟ್ವಾ ರಾಜಾನಮಾತುರಮ್ ॥೩೫॥

ಜನಮೇಜಯನೇ! ಅನಂತರ ಎಲ್ಲಾ ಸ್ತ್ರೀಯರೂ ಹಾಗೂ ಎಲ್ಲಾ ಸ್ನೇಹಿತರೂ ದುಃಖಿತನಾದ ಧೃತರಾಷ್ಟ್ರನನ್ನು ಕಂಡು ಹೊರಟುಹೋದರು.

ತತೋ ನರಪತಿಸ್ತತ್ರ ಸಂಜ್ಞಾಂ ಲಬ್ಧ್ವಾ ಪರಂತಪ ।
ಗತಿರ್ಮೇ ಕೋ ಭವೇದದ್ಯ ಇತಿ ಚಿಂತಾಸಮಾಕುಲಃ ॥೩೬॥

ಅವೈಕ್ಷತ್ ಸಂಜಯಂ ತತ್ರ ರುದಮಾನೋ ಮಹೀಪತಿಃ ॥೩೭॥

ಶತ್ರುತಾಪಕರನೇ! ಅನಂತರ ರಾಜ ಧೃತರಾಷ್ಟ್ರನು ಎಚ್ಚರಗೊಂಡು ''ನನಗೆ ಇನ್ನಾರು ಗತಿ?'' ಎಂಬುದಾಗಿ ಚಿಂತಾಕ್ರಾಂತನಾಗಿ ಅಳುತ್ತಾ ಸಂಜಯನನ್ನು ನೋಡಿದ.

ಪ್ರಾಂಜಲಿಂ ಸಂಜಯಂ ದೃಷ್ಟ್ವಾ ರುದಮಾನಂ ಮುಹುರ್ಮುಹುಃ ।
ಬಹುಶಶ್ಚಿಂತಯಿತ್ವಾ ತು ಸಂಜಯಂ ವಾಕ್ಯಮಬ್ರವೀತ್ ॥೩೮॥

ಕೈಮುಗಿದು ಮತ್ತೆ ಮತ್ತೆ ಅಳುತ್ತಿರುವ ಸಂಜಯನನ್ನು ನೋಡಿ ಬಹಳವಾಗಿ ಆಲೋಚಿಸಿ ಈ ಮಾತನ್ನು ಹೇಳಿದನು.

ಪ್ರಾಂಜಲಿರ್ನಿಶ್ವಸಂತಂ ಚ ತಂ ನರೇಂದ್ರಂ ಮುಹುರ್ಮುಹುಃ ।
(ರಾಜಾನಂ ಶೋಚಮಾನಸ್ತು ತಂ ಶೋಚಂತಂ ಮುಹುರ್ಮುಹುಃ-ಪಾ)
ಸಮಾಶ್ವಾಸಯತ ಕ್ಷತ್ತಾ ವಚಸಾ ಮಧುರೇಣ ಚ ॥೩೯॥

ದುಃಖದಿಂದ ಮತ್ತೆ ಮತ್ತೆ ನಿಟ್ಟುಸಿರನ್ನು ಬಿಡುತ್ತಿದ್ದ ರಾಜನನ್ನು ವಿದುರನು ಅಂಜಲಿಬದ್ಧನಾಗಿ ಮಧುರವಾದ ಮಾತಿನಿಂದ ಸಮಾಧಾನಪಡಿಸುತ್ತಾನೆ.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಶಲ್ಯಪರ್ವಣಿ ಪ್ರಥಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಶಲ್ಯಪರ್ವದಲ್ಲಿ ಒಂದನೆಯ ಅಧ್ಯಾಯ ಮುಗಿಯಿತು.

★ ★ ★ ★ ★

## ಎರಡನೆಯ ಅಧ್ಯಾಯ

ಧೃತರಾಷ್ಟ್ರನು ಅಳುತ್ತಾ ಸಂಜಯನಲ್ಲಿ ಯುದ್ಧವೃತ್ತಾಂತವನ್ನು ಕೇಳುವುದು.

**ವಿಸೃಷ್ಟಾಸ್ವಥ ನಾರೀಷು ಧೃತರಾಷ್ಟ್ರೋಽಂಬಿಕಾಸುತಃ ।**
**ವಿಲಲಾಪ ಮಹಾರಾಜ ದುಃಖಾದ್ದುಃಖತರಂ ಗತಃ ॥೧॥**

ಮಹಾರಾಜ! ವಿದುರನ ಮಾತಿನಂತೆ ಅಂತಃಪುರದ ಸ್ತ್ರೀಯರು ಹೊರಗೆ ಹೋದ ಮೇಲೆ ಅಂಬಿಕಾಪುತ್ರನಾದ ಧೃತರಾಷ್ಟ್ರನು ಅತ್ಯಂತದುಃಖವನ್ನು ಹೊಂದಿದವನಾಗಿ ಜೋರಾಗಿ ಅತ್ತನು.

**ಸಧೂಮಮಿವ ನಿಃಶ್ವಸ್ಯ ಕರೌ ಧುನ್ವನ್ ಪುನಃ ಪುನಃ ।**
**ಬಹುಶಶ್ಚಿಂತಯಿತ್ವಾ ತು ಸಂಜಯಂ ವಾಕ್ಯಮಬ್ರವೀತ್ ॥೨॥**

ಬೆಂಕಿಯಂತೆ ಬಿಸಿಯಾದ ನಿಟ್ಟುಸಿರನ್ನು ಬಿಟ್ಟು, ಮತ್ತೆ ಮತ್ತೆ ಕೈಹೊಸೆಯುತ್ತಾ, ಬಹಳವಾಗಿ ಚಿಂತಿಸಿ ಸಂಜಯನನ್ನು ಕುರಿತು ಹೀಗೆಂದನು.

ಧೃತರಾಷ್ಟ್ರಃ

**ಅಹೋ ಬತ ಮಹದ್ದುಃಖಂ ಯದಹಂ ಪಾಂಡವಾನ್ ರಣೇ ।**
**ಕ್ಷೇಮಿಣಶ್ಚಾವ್ಯಯಾಂಶ್ಚೈವ ತ್ವತ್ತಃ ಸೂತ ಶೃಣೋಮ್ಯಹಮ್ ॥೩॥**

ಸಂಜಯ! ಯುದ್ಧದಲ್ಲಿ ಪಾಂಡವರು ಯಾವುದೇ ಹಾನಿಗೊಳಗಾಗದೆ ಕ್ಷೇಮವಾಗಿದ್ದಾರೆ ಎಂಬುದನ್ನು ನಾನು ನಿನ್ನಿಂದ ಕೇಳಿ ತಿಳಿದುಕೊಂಡೆ. ಈ ಸಮಾಚಾರದಿಂದ ನನಗೆ ಬಹಳ ದುಃಖವಾಗಿದೆ. ಹಾ! ಕಷ್ಟ!

ವಜ್ರಸಾರಮಯಂ ನೂನಂ ಹೃದಯಂ ಮಮ ದುರ್ಭಿದಮ್ ।
ಯಚ್ಛ್ರುತ್ವಾ ನಿಹತಾನ್ ಪುತ್ರಾನ್ ದೀರ್ಯತೇ ನ ಸಹಸ್ರಧಾ ॥೪॥

ನನ್ನ ಮಕ್ಕಳು ಸತ್ತಿದ್ದಾರೆ ಎಂಬ ವಿಷಯವನ್ನು ಕೇಳಿಯೂ ಸಾವಿರಹೋಳಾಗದ ನನ್ನೀ ಹೃದಯವು ನಿಶ್ಚಯವಾಗಿಯೂ ಎಂದಿಗೂ ಒಡೆಯದ ವಜ್ರಾಯುಧ(ವಜ್ರ)ದಂತೆ ಸಾರಭೂತವಾಗಿದೆ.

ಚಿಂತಯಿತ್ವಾ ವಚಸ್ತೇಷಾಂ ಬಾಲಕ್ರೀಡಾಂ ಚ ಸಂಜಯ ।
ಅದ್ಯ ಚೈವ ಹತಾನ್ ಶ್ರುತ್ವಾ ಭೃಶಂ ಮೇ ದೂಯತೇ ಮನಃ ॥೫॥

ಸಂಜಯ! ನನ್ನ ಮಕ್ಕಳ ಬಾಲ್ಯದ ತೊದಲ್ನುಡಿಗಳನ್ನೂ, ಅವರ ಬಾಲ್ಯದ ಚೇಷ್ಟೆಗಳನ್ನು ನೆನೆಸಿಕೊಂಡು, ಮತ್ತೆ ಈಗ ಅವರು ಸತ್ತಿದ್ದಾರೆ ಎಂದು ಕೇಳಿ ನನ್ನ ಮನಸ್ಸು ಬಹಳವಾಗಿ ದುಃಖಿತವಾಗಿದೆ.

ಅಂಧತ್ವಾದ್ಯದಿ ಪುತ್ರಾಣಾಂ ನ ಮೇ ರೂಪನಿದರ್ಶನಮ್ ।
ಪುತ್ರಸ್ನೇಹಕೃತಾ ಪ್ರೀತಿಃ ನಿತ್ಯಮೇತೇಷು ಧಾರಿತಾ ॥೬॥

ನಾನು ಕುರುಡನಾದ್ದರಿಂದ ನನ್ನ ಮಕ್ಕಳ ರೂಪವನ್ನು ನಾನು ಕಾಣಲಿಲ್ಲ. ಆದರೂ ಮಕ್ಕಳ ಮಮತೆಯಿಂದುಂಟಾದ ಪ್ರೀತಿಯನ್ನು ಅವರಲ್ಲಿ ನಿತ್ಯವೂ ಹೊಂದಿದ್ದೇನೆ.

ಬಾಲಭಾವಮತಿಕ್ರಾಂತಾನ್ ಯೌವನಸ್ಥಾಂಶ್ಚ ತಾನಹಮ್ ।
ವೃದ್ಧಿಪ್ರಾಪ್ತಾನಹಂ ಶ್ರುತ್ವಾ ಹೃಷ್ಟ ಆಸಂ ತದಾ ಭೃಶಮ್ ॥೭॥

ಬಾಲ್ಯವನ್ನು ಕಳೆದುಕೊಂಡು ನನ್ನ ಮಕ್ಕಳು ಯೌವನಾಸ್ಥೆಗೆ ಬಂದು ಬೆಳೆದು ನಿಂತರು ಎಂಬುದನ್ನು ಕೇಳಿದಾಗ ನಾನು ಬಹಳವಾಗಿ ಸಂತೋಷಗೊಂಡಿದ್ದೆ.

ತಾನದ್ಯ ನಿಹತಾನ್ ಶ್ರುತ್ವಾ ಹೃತೈಶ್ವರ್ಯಾನ್ ಹೃತೌಜಸಃ ।
ನ ಲಭೇ ವೈ ಕ್ವಚಿಚ್ಛಾಂತಿಂ ಪುತ್ರಾಧಿಭಿರಭಿಪ್ಲುತಃ ॥೮॥

ಅಂತಹ ನನ್ನ ಮಕ್ಕಳು ಇಂದು ಸಂಪತ್ತು ಕೀರ್ತಿ ಓಜಸ್ಸುಗಳನ್ನು (ಪರಾಕ್ರಮ) ಕಳೆದುಕೊಂಡು ಸತ್ತಿದ್ದಾರೆ ಎಂದು ಕೇಳಿ ಪುತ್ರಶೋಕದಿಂದ ತುಂಬಿ ಎಲ್ಲಿಯೂ ನೆಮ್ಮದಿಯನ್ನು ನಿಶ್ಚಯವಾಗಿಯೂ ಹೊಂದಲಾರೆ.

ಏಹ್ಯೇಹಿ ವತ್ಸ ರಾಜೇಂದ್ರ ಮಮಾನಾಥಸ್ಯ ಪುತ್ರಕ ।
ತ್ವಯಾ ಹೀನೋ ಮಹಾಬಾಹೋ ಕಾಂ ನು ಯಾಸ್ಯಾಮ್ಯಹಂ ಗತಿಮ್॥

ರಾಜನೇ! ಪ್ರಿಯನೇ! ಅನಾಥನಾದ ನನ್ನ ಕುಮಾರನೇ! ಎದ್ದೇಳು! ಎದ್ದೇಳು! ಹೇ ಮಹಾಪರಾಕ್ರಮಿಯೇ! ನಿನ್ನನ್ನಗಲಿ ನಾನು ಯಾವ ಗತಿಯನ್ನು ತಾನೇ ಹೊಂದಲಿ?

ಗತಿರ್ಭೂತ್ವಾ ಮಹಾರಾಜ ಜ್ಞಾತೀನಾಂ ಸುಹೃದಾಂ ತಥಾ ।
ಅಂಧಂ ವೃದ್ಧಂ ಚ ಮಾಂ ವೀರ ವಿಹಾಯ ತ್ವಂ ಕ್ವ ಗಚ್ಛಸಿ ॥೧೦॥

ಹೇ ಮಹಾರಾಜ! ಬಂಧುಗಳಿಗೆ ಹಾಗೂ ಸ್ನೇಹಿತರಿಗೆ ನೀನೇ ಸರ್ವಾಶ್ರಯನಾಗಿದ್ದಿ. ಹೇ ವೀರನೇ! ಕಣ್ಣುಕಾಣಿಸದ ಮುದುಕನಾದ ನನ್ನನ್ನು ಬಿಟ್ಟು ನೀನು ಎಲ್ಲಿಗೆ ಹೋಗುತ್ತಿ?

ಯಾ ಕೃಪಾ ಯಾ ಚ ತೇ ಪ್ರೀತಿಃ ಯಾ ಚ ರಾಜಸು ಮಾನಿತಾ ।
ಕಥಂ ತ್ವಂ ನಿಹತಃ ಪಾರ್ಥೈಃ ಸಂಯುಗೇಷ್ವಪರಾಜಿತಃ ॥೧೧॥

ಪ್ರಜೆಗಳಲ್ಲಿ ನೀನು ಮಾಡುವ ಕರುಣೆಯಾಗಲೀ ಹಾಗೂ ನೀನು ತೋರುವ ಪ್ರೀತಿಯಾಗಲೀ, ರಾಜರೆಲ್ಲರು ನಿನಗೆ ಕೊಡುವ ಗೌರವವಾಗಲೀ ಅಸದೃಶವಾದುದು. ಹೀಗೆ ಯುದ್ಧದಲ್ಲಿ ಸದಾ ಜಯಶಾಲಿಯಾದ ನಿನ್ನನ್ನು ಪಾಂಡವರು ಹೇಗೆ ತಾನೆ ಕೊಂದು ಹಾಕಿದರು?

ಕಥಂ ತ್ವಂ ಪೃಥಿವೀಪಾಲಾನ್ ತ್ಯಕ್ತ್ವಾ ತಾತ ಸಮಾಗತಾನ್ ।
ಶೇಷೇಽದ್ಯ ನಿಹತೋ ಭೂಮೌ ಪ್ರಾಕೃತಃ ಕುನೃಪೋ ಯಥಾ ॥೧೨॥

ರಾಜನೇ! ನಿನ್ನ ದರ್ಶನಕ್ಕಾಗಿ ಅನೇಕ ಚಕ್ರವರ್ತಿಗಳು ಬಂದಿದ್ದಾರೆ. ಅಂತಹವರನ್ನು ಬಿಟ್ಟು ಇಂದು ನೀನು ಭೂಮಿಯಲ್ಲಿ ಸಾಮಾನ್ಯ ರಾಜನಂತೆ ಹೇಗೆ ಸತ್ತು ಮಲಗಲು ಸಾಧ್ಯವಾಯಿತು?

ಕೋ ನು ಮಾಮುತ್ಥಿತಂ(ಮುತ್ಥಿತಃ) ವೀರ(ಕಾಲೇ)ತಾತ ತಾತೇತಿ ವಕ್ಷ್ಯತಿ ।
ಮಹಾರಾಜೇತಿ ಸತತಂ ಲೋಕನಾಥೇತಿ ಚಾಸಕೃತ್ ॥೧೩॥

ಹೇ ವೀರ! (ನನ್ನ ಏಳುವಿಕೆಯನ್ನೇ ಎದುರುನೋಡುತ್ತಾ) ನಾನು ಎದ್ದಾಗ ''ತಂದೆ! ಅಪ್ಪ! ಮಹಾರಾಜ! ಲೋಕನಾಥ!'' ಎಂಬುದಾಗಿ ಪದೇ ಪದೇ ಯಾರು ಹೇಳುವರು?

ಪರಿಷ್ವಜ್ಯ ತು ಕಂ ಕಂಠೇ ಸ್ನೇಹೇನ ಕ್ಲಿನ್ನಲೋಚನಃ ।
ಅನುಶಾಸ್ಮಾಸ್ಮಿ ಕೌರವ್ಯ ತತ್ ಸಾಧು ವದ ಮೇ ವಚಃ ॥೧೪॥

ಕುರುಕುಲನಂದನ! ನಾನಾದರೂ ಪ್ರೀತಿಯಿಂದ ತೇವಗೊಂಡ ಕಣ್ಣುಳ್ಳವನಾಗಿ ಯಾರನ್ನು ಆಲಿಂಗಿಸಿಕೊಳ್ಳಲಿ? ಯಾರಿಗೆ ಆದೇಶವನ್ನು ಕೊಡಲಿ? ಈ ಎಲ್ಲಾ ನನ್ನ ಪ್ರಶ್ನೆಗಳಿಗೆ ಒಳ್ಳೆಯ ಉತ್ತರವನ್ನು ಕೊಡು.

ನನು ನಾಮಾಹಮಶ್ರೌಷಂ ವಚನಂ ತವ ಪುತ್ರಕ ।
ಭೂಯಸೀ ಮಮ ಸೇನಾ ಚ ತಾತ ಪಾರ್ಥಸ್ಯ ನೋ ತಥಾ ॥೧೫॥

ಪ್ರಿಯಕುಮಾರನೆ! ಹಿಂದೆ ನೀನಾಡಿದ ಮಾತನ್ನು ನಾನೂ ಕೇಳಿಸಿಕೊಂಡಿದ್ದೆ! ''ತಂದೆ! ನನ್ನ ಸೈನ್ಯವು ಬಹಳವಾಗಿದೆ. ಪಾಂಡವರ ಸೈನ್ಯವು ಹಾಗಿಲ್ಲ''.

ಭಗದತ್ತಃ ಕೃಪಶ್ಶಲ್ಯ ಆವಂತ್ಯೌ ಚ ಜಯದ್ರಥಃ ।
ಭೂರಿಶ್ರವಾಃ ಸೋಮದತ್ತೋ ಮಹಾರಾಜಶ್ಚ ಬಾಹ್ಲಿಕಃ ॥೧೬॥

ಅಶ್ವತ್ಥಾಮಾ ಕೃತವರ್ಮಾ ಮಾಗಧಶ್ಚ ಮಹಾಬಲಃ ।
ಬೃಹದ್ಬಲಶ್ಚ ಕಾಶೀಶಃ ಶಕುನಿಶ್ಚಾಪಿ ಸೌಬಲಃ ॥೧೭॥

ಮ್ಲೇಚ್ಛಾಶ್ಚ ಬಹುಸಾಹಸ್ರಾಃ ಶಕಾಶ್ಚ ಯವನೈಸ್ಸಹ ।
ಸುದಕ್ಷಿಣಶ್ಚ ಕಾಂಭೋಜಃ ತ್ರಿಗರ್ತಾಧಿಪತಿಸ್ತಥಾ ॥೧೮॥

ಭೀಷ್ಮಃ ಪಿತಾಮಹಶ್ಚೈವ ಭಾರದ್ವಾಜೋऽಥ ಗೌತಮಃ ।
ಶ್ರುತಾಯುಶ್ಚಾಶ್ರುತಾಯುಶ್ಚ ಶತಾಯುಶ್ಚಾಪಿ ವೀರ್ಯವಾನ್ ॥೧೯॥

ಜಲಸಂಧೋऽಪ್ಯಾರ್ಶ್ಯಶೃಂಗೀ ರಾಕ್ಷಸಶ್ಚಾಪ್ಯಲಾಯುಧಃ ।
ಅಲಂಬುಸೋ ವೀರಬಾಹುಃ ಸುಬಾಹುಶ್ಚ ಶತಾಯುಧಃ ॥೨೦॥

ಏತೇ ಚಾನ್ಯೇ ಚ ಬಹವೋ ರಾಜಾನೋ ರಾಜಸತ್ತಮ ।
ಮದರ್ಥಂ ಪ್ರಹರಿಷ್ಯಂತಿ ಪ್ರಾಣಾಂಸ್ತ್ಯಕ್ತ್ವಾ ಮಹಾರಣೇ ॥೨೧॥

ಎಲೈ ರಾಜಶ್ರೇಷ್ಠನೇ! ಭಗದತ್ತ, ಕೃಪ, ಶಲ್ಯ, ಅವಂತಿ ದೇಶದ ರಾಜ, ಜಯದ್ರಥ, ಭೂರಿಶ್ರವಸ್ಸು, ಸೋಮದತ್ತ, ಬಾಹ್ಲಿಕ ಮಹಾರಾಜ, ಅಶ್ವತ್ಥಾಮ, ಕೃತವರ್ಮ,

ಮಗಧಾಧಿಪತಿಯಾದ ಮಹಾಬಲಶಾಲಿ ಬೃಹದ್ಬಲ, ಕಾಶಿದೇಶದ ರಾಜ, ಸುಬಲದೇಶದ ಅಧಿಪತಿ ಶಕುನಿ, ಅನೇಕ ಸಹಸ್ರ ಸಂಖ್ಯೆಯ ಮ್ಲೇಚ್ಛರು, ಅಷ್ಟೇ ಸಂಖ್ಯೆಯ ಶಕರು, ಯವನರು, ಸುದಕ್ಷಿಣ, ಕಾಂಭೋಜ, ತ್ರಿಗರ್ತದೇಶದ ರಾಜ, ಪಿತಾಮಹನಾದ ಭೀಷ್ಮ, ಭರದ್ವಾಜಪುತ್ರನಾದ ಗೌತಮ, ಶ್ರುತಾಯು, ಅಶ್ರುತಾಯು, ಬಲಶಾಲಿಯಾದ ಶತಾಯು, ಜಲಸಂಧ, ಆರ್ಶ್ಯಶೃಂಗಿ, ಅಲಾಯುಧನೆಂಬ ರಾಕ್ಷಸ, ಅಲಂಬುಸ, ವೀರಬಾಹು, ಸುಬಾಹು, ಶತಾಯುಧ ಇವರು ಹಾಗೂ ಇನ್ನೂ ಅನೇಕ ರಾಜರುಗಳು ನನಗಾಗಿ ಯುದ್ಧ ಮಾಡುತ್ತಾರೆ. ರಣರಂಗದಲ್ಲಿ ನನಗಾಗಿ ಪ್ರಾಣವನ್ನೂ ಬಿಡುತ್ತಾರೆ.

**ತೇಷಾಂ ಮಧ್ಯೇ ಸ್ಥಿತೋ ಯುದ್ಧೇ ಭ್ರಾತೃಭಿಃ ಪರಿವಾರಿತಃ ।**
**ಯೋಧಯಿಷ್ಯಾಮ್ಯಹಂ ಪಾರ್ಥಾನ್ ಪಾಂಚಾಲಾನ್ ಸೃಂಜಯಾಂಸ್ತಥಾ ॥**

**ಸೋಮಕಾನ್ ನೃಪಶಾರ್ದೂಲ ದ್ರೌಪದೇಯಾಂಶ್ಚ ಸಂಯುಗೇ ।**
**ಸಾತ್ಯಕಿಂ ಕುಂತಿಭೋಜಂ ಚ ರಾಕ್ಷಸಂ ಚ ಘಟೋತ್ಕಚಮ್ ॥೨೩॥**

**ಏಕೋಽಪ್ಯೇಷಾಂ ಮಹಾರಾಜ ಸಮರ್ಥಸ್ಸನ್ನಿವಾರಣೇ ।**
**ಸಮರೇ ಪಾಂಡುಯೋಧಾನಾಂ ಸಂಕ್ರುದ್ಧೋ ಹ್ಯಭಿಧಾವತಾಮ್ ।**
**ಕಿಂ ಪುನಸ್ಸಹಿತೋ ವೀರೈಃ ಕೃತವೈರಶ್ಚ ಪಾಂಡವೈಃ ॥೨೪॥**

''ಎಲೈ ರಾಜೇಂದ್ರನೇ! ಇಂತಹ ಯೋಧರ ಮಧ್ಯದಲ್ಲಿ ಸುತ್ತಲೂ ಸಹೋದರರನ್ನು ಸೇರಿಸಿಕೊಂಡು ಎದುರು ಪಕ್ಷದಲ್ಲಿರುವ ಪಾರ್ಥರು, ಪಾಂಚಾಲರು, ಸೃಂಜಯರು, ಸೋಮಕರು, ದ್ರೌಪದಿಕುಮಾರರು, ಸಾತ್ಯಕಿ, ಕುಂತಿಭೋಜ, ರಾಕ್ಷಸನಾದ ಘಟೋತ್ಕಚ ಇವರೆಲ್ಲರ ಜೊತೆಗೆ ಹೋರಾಡುತ್ತೇನೆ. ಮಹಾರಾಜ! ರಣರಂಗದಲ್ಲಿ ಯುದ್ಧಕ್ಕೆ ಧಾವಿಸಿಬರುವ ಈ ಪಾಂಡವರನ್ನು ಎದುರಿಸಲು ಕೋಪಗೊಂಡ ನಾನೊಬ್ಬನೇ ಸಾಕು. ಹಾಗಿರುವಾಗ ಪಾಂಡವರೊಡನೆ ದ್ವೇಷಸಾಧಿಸುತ್ತಿರುವ ನಾನು ವೀರಯೋಧರಿಂದ ಕೂಡಿಕೊಂಡಿರುವಾಗ ಮತ್ತೇನು ಹೇಳಬೇಕು?''

**ಅಥವಾ ಸರ್ವಪಾಂಚಾಲ್ಯೈಃ ಪಾಂಡವಸ್ಯಾನುಸೈನಿಕೈಃ ।**
**ಯೋತ್ಸ್ಯಾಮಿ ಸಹ ರಾಜೇಂದ್ರ ಹನಿಷ್ಯಾಮಿ ಚ ತಾನ್ ಮೃಧೇ ॥೨೫॥**

''ಅಥವಾ ಪಾಂಡವರ ಅನುಯಾಯಿಗಳಾದ ಸೈನಿಕರಿಂದ ಕೂಡಿಕೊಂಡ ಸರ್ವಪಾಂಚಾಲರ ಜೊತೆಗೆ ಹೋರಾಡುತ್ತೇನೆ. ರಾಜೇಂದ್ರ! ರಣರಂಗದಲ್ಲಿ ಅವರೆಲ್ಲರನ್ನೂ ಸಾಯಿಸುತ್ತೇನೆ''.

ಕರ್ಣಸ್ತ್ವೇಕೋ ಮಯಾ ಸಾರ್ಧಂ ನಿಹನಿಷ್ಯತಿ ಪಾಂಡವಾನ್ ।
ತೇ ವೈ ನೃಪತಯೋ ವೀರಾಃ ಸ್ಥಾಸ್ಯಂತಿ ಮಮ ಶಾಸನೇ ॥೨೬॥

''ಕರ್ಣನು ನನಗೆ ಸಹಾಯಕ್ಕೆ ನಿಂತುಕೊಂಡು ಪಾಂಡವರನ್ನು ಕೊಂದುಹಾಕುವನು. ಹಿಂದೆ ಹೇಳಿದ ಎಲ್ಲಾ ವೀರರಾದ ರಾಜರೂ ನನ್ನ ಅಧೀನದಲ್ಲಿಯೇ ಇರುತ್ತಾರೆ''.

ಯಶ್ಚ ತೇಷಾಂ ಪ್ರಣೇತಾ ವೈ ವಾಸುದೇವೋ ಮಹಾಬಲಃ ।
ನ ಸ ಸಂನಹ್ಯತೇ ರಾಜನ್ನಿತಿ ಮಾಮಬ್ರವೀದ್ವಚಃ ॥೨೭॥

''ಹೇ ರಾಜನ್! ಇನ್ನು ಪಾಂಡವರಿಗೆ ಮಾರ್ಗದರ್ಶಕನಾದ ವಸುದೇವಪುತ್ರ ಶ್ರೀಕೃಷ್ಣನೂ ಯುದ್ಧದಲ್ಲಿ ಕವಚವನ್ನು ತೊಡುವುದಿಲ್ಲ'' ಎಂಬುದಾಗಿ ದುರ್ಯೋಧನನು ನನಗೆ ಹೇಳಿದ್ದಾನೆ.

ಏವಂ ಚ ವದತಸ್ಸೂತ ಬಹುಶೋ ಮಮ ಸನ್ನಿಧೌ ।
ಯುಕ್ತಿತೋಽಪ್ಯನುಪಶ್ಯಾಮಿ ನಿಹತಾನ್ ಪಾಂಡವಾನ್ ಮೃಧೇ ॥೨೮॥

ಎಲೈ ಸೂತನೇ! ಇಂತಹ ಅನೇಕ ಮಾತುಗಳನ್ನು ದುರ್ಯೋಧನನು ನನ್ನ ಮುಂದೆ ಹೇಳಿದ್ದಾನೆ. ಯುಕ್ತಿಗಳಿಂದ ವಿಚಾರಮಾಡಿದಾಗಲೂ ಪಾಂಡವರೆಲ್ಲರೂ ಯುದ್ಧದಲ್ಲಿ ಮಡಿದಿರುವರು ಎಂಬುದಾಗಿ ನಿರೀಕ್ಷಿಸುತ್ತಿದ್ದೇನೆ.

ತೇಷಾಂ ಮಧ್ಯೇ ಸ್ಥಿತೋ ಯತ್ರ ಹನ್ಯತೇ ಮಮ ಪುತ್ರಕಃ ।
ವ್ಯಾಯಚ್ಛಮಾನಸ್ಸಮರೇ ಕಿಮನ್ಯದ್ಭಾಗಧೇಯತಃ ॥೨೯॥

ಇಂತಹವರ ಮಧ್ಯದಲ್ಲಿ ಸದಾ ಯುದ್ಧದಲ್ಲಿ ಉದ್ಯುಕ್ತನಾದ ನನ್ನ ಪ್ರಿಯ ಮಗನು ಹತನಾಗಿದ್ದಾನೆಂದರೆ ವಿಧಿಯನ್ನಲ್ಲದೆ ಬೇರೇನನ್ನು ಹೇಳಲು ಸಾಧ್ಯ?

ಭೀಷ್ಮಶ್ಚ ನಿಹತೋ ಯತ್ರ ಲೋಕನಾಥಃ ಪ್ರತಾಪವಾನ್ ।
ಶಿಖಂಡಿನಂ ಸಮಾಸಾದ್ಯ ಮೃಗೇಂದ್ರ ಇವ ಕುಂಜರಮ್ ॥೩೦॥

**ದ್ರೋಣಶ್ಚ ಬ್ರಾಹ್ಮಣೋ ವೃದ್ಧಃ ಸರ್ವಶಸ್ತ್ರಾಸ್ತ್ರಪಾರಗಃ ।**
**ನಿಹತಃ ಪಾಂಡವೈಸ್ಸಂಖೇ ಕಿಮನ್ಯದ್ಭಾಗಧೇಯತಃ ॥೩೦॥**

ಶಿಖಂಡಿಯನ್ನು ಮುಂದಿಟ್ಟುಕೊಂಡು ಪರಾಕ್ರಮಿಯಾದ ಲೋಕೇಶ್ವರ ಭೀಷ್ಮನೂ ಆನೆಯ ಮುಂದೆ ಸಿಂಹದ ಹಾಗೆ ತಾನು ಹತನಾಗಿದ್ದಾನೆ. ಸಕಲಶಸ್ತ್ರ-ಅಸ್ತ್ರವೇತ್ತನಾದ ಜ್ಞಾನವಯೋವೃದ್ಧಬ್ರಾಹ್ಮಣ ದ್ರೋಣನೂ ಯುದ್ಧದಲ್ಲಿ ಪಾಂಡವರಿಂದ ಹತನಾಗಿದ್ದಾನೆ. ಅದೃಷ್ಟವಲ್ಲದೆ ಬೇರೇನೂ ಇಲ್ಲಿ ಕಾರಣವಾಗಿಲ್ಲ.

**ಭೂರಿಶ್ರವಾ ಹತೋ ಯತ್ರ ಸೋಮದತ್ತಶ್ಚ ಸಂಯುಗೇ ।**
**ಬಾಹ್ಲಿಕಶ್ಚ ಮಹಾರಾಜಃ ಕಿಮನ್ಯದ್ಭಾಗಧೇಯತಃ ॥೩೨॥**

ಯುದ್ಧದಲ್ಲಿ ಭೂರಿಶ್ರವಸ್ಸು, ಸೋಮದತ್ತ, ಬಾಹ್ಲಿಕ ಮಹಾರಾಜ ಇವರೆಲ್ಲರೂ ಹತರಾಗಿದ್ದಾರೆ. ವಿಧಿಯೇ ಇಲ್ಲಿ ಪ್ರಧಾನ ಕಾರಣ.

**ಭಗದತ್ತೋ ಹತೋ ಯತ್ರ ರಾಜ(ಗಜ)ಯುದ್ಧವಿಶಾರದಃ ।**
**ಜಯದ್ರಥಶ್ಚ ನಿಹತಃ ಕಿಮದ್ಯದ್ಭಾಗಧೇಯತಃ ॥೩೩॥**

ಯಾವ ಈ ಯುದ್ಧದಲ್ಲಿ, ಯುದ್ಧದಲ್ಲಿ ಕುಶಲನಾದ ಭಗದತ್ತ, ಜಯದ್ರಥನೂ ಸತ್ತಿದ್ದಾರೆ. ಅಹೋ! ವಿಧಿಯಲ್ಲದೇ ಬೇರೆ ಏನೂ ಕಾರಣವಿಲ್ಲ.

**ಸುದಕ್ಷಿಣೋ ಹತೋ ಯತ್ರ ಜಲಸಂಧಶ್ಚ ಕೌರವಃ ।**
**ಶ್ರುತಾಯುಶ್ಚ ಶತಾಯುಶ್ಚ ಕಿಮನ್ಯದ್ಭಾಗಧೇಯತಃ ॥೩೪॥**

ಸುದಕ್ಷಿಣ, ಜಲಸಂಧ, ಶ್ರುತಾಯು, ಶತಾಯು ಮೊದಲಾದವರೂ ಯುದ್ಧದಲ್ಲಿ ಸತ್ತಿದ್ದಾರೆ. ವಿಧಿಯೇ ಇದಕ್ಕೆಲ್ಲಾ ಕಾರಣ.

**ಮಹಾಬಲಸ್ತಥಾ ಶಲ್ಯಃ ಸರ್ವಶಸ್ತ್ರಾಸ್ತ್ರಪಾರಗಃ ।**
**ನಿಹತಃ ಪಾಂಡವೈಸ್ಸಂಖೇ ಕಿಮನ್ಯದ್ಭಾಗಧೇಯತಃ ॥೩೫॥**

ಮಹಾಬಲ, ಸಕಲಶಸ್ತ್ರವೇತ್ತನಾದ ಶಲ್ಯ ಇವರೂ ಯುದ್ಧದಲ್ಲಿ ಪಾಂಡವರ ಕೈಯಿಂದ ಹತರಾಗಿದ್ದಾರೆ. ಇದು ವಿಧಿಯಲ್ಲದೆ ಮತ್ತೇನು?

